# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೭ ಸಂಚಿಕೆ : ೦೧ ಜನವರಿ–ಜೂನ್ ೨೦೧೩




ಸಂಪಾದಕರು
ಪ್ರೊ. ಜಿ. ಅಬ್ದುಲ್ ಬಷೀರ್

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ (ರಿ.)
೩ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯, ದೂರವಾಣಿ : ೨೬೬೧೫೮೭೭




ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೭ ಸಂಚಿಕೆ : ೦೧ ಜನವರಿ–ಜೂನ್ ೨೦೧೩

ಸಂಪಾದಕರು

**ಪ್ರೊ॥ ಜಿ. ಅಬ್ದುಲ್ ಬಷೀರ್**




ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು – ೫೬೦ ೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩
ಇ–ಮೇಲ್ : bmsritrust@gmail.com

**KARNATAKA LOCHANA** - (Half yearly Research Journal)
Editor : Prof. **G. Abdul Basheer**. Published by **B.M.Sri. Smaraka Prathistana, M.V.Si. P.G. Reseach Center, B.M.Sri. Kalabhavan(R),** 3rd Main Road, Narasimharaja Colony, Bangalore - 560 019. Ph.No. 080-26615877, 26676773 Pages: vi+98

Year : January-June 2013 (Vol. 27 , No. 1),

| | | |
|---|---|---|
| Yearly Subscription | : | **Rs. 100/-** (for Libraries) |
| For Individual | : | **Rs. 50/-** |
| Single issue | : | **Rs. 30/-** |
| ವಾರ್ಷಿಕ ಚಂದಾ | : | ರೂ. ೧೦೦/- (ಗ್ರಂಥಾಲಯಗಳಿಗೆ) |
| ಪ್ರತಿಷ್ಠಾನದ ಆಜೀವ ಸದಸ್ಯತ್ವ | : | ರೂ. ೫೦೦/- (ಲೋಚನ ಉಚಿತ) |
| ವ್ಯಕ್ತಿಗಳಿಗೆ | : | ರೂ. ೫೦/- |
| ಬಿಡಿ ಪ್ರತಿ | : | ರೂ. ೩೦/- |




ಮುದ್ರಣ
ಚಂದನ ಪ್ರಿಂಟರ್ಸ್
೩೧೨, ೭ನೇ ಮೇನ್
ನಾಗೇಂದ್ರ ಬ್ಲಾಕ್
ಬನಶಂಕರಿ ೧ನೇ ಹಂತ
ಬೆಂಗಳೂರು-೫೬೦ ೦೫೦

# ಮುಂಮಾತು

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ, ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ. ಕನ್ನಡ ನಾಡಿನ ಅನೇಕ ವಿಶ್ವವಿದ್ಯಾನಿಲಯಗಳಂತಹ ಉನ್ನದ ಅಧ್ಯಯನ ಕೇಂದ್ರಗಳು ನಡೆಸಿಕೊಂಡು ಬರುತ್ತಿದ್ದ ಸಂಶೋಧನೆಗೆ ಮೀಸಲಾದ ನಿಯತಕಾಲಿಕೆಗಳಲ್ಲಿ ಅನೇಕವು ಈಗಾಗಲೇ ನಿಂತುಹೋಗಿವೆ. ಹಾಗಾಗದೆ ಇದನ್ನು ಆದಷ್ಟೂ ನಿಗದಿತ ವೇಳೆಗೆ ಹೊರತರುವ ಉದ್ದೇಶ ಪ್ರತಿಷ್ಠಾನದ್ದು. ಆದರೆ ದಿನೇ ದಿನೇ ಗುಣಮಟ್ಟದ ಲೇಖನಗಳ ಕೊರತೆ ಎದ್ದು ಕಾಣುತ್ತಿದೆ; ಹೀಗಾಗಿ ಮೈದುಂಬಿಕೊಂಡು ಪತ್ರಿಕೆ ಬರಲು ಅಡ್ಡಿಯೇ ಎನ್ನಬಹುದು. ಪತ್ರಿಕೆಯ ಮುದ್ರಣವ್ಯವಸ್ಥೆಗೆ ವಿಳಂಬವೇನಾಗದು, ಆದರೆ ಕೆಲವು ವೇಳೆ ಸಾಕಷ್ಟು ಲೇಖನಗಳು ಕೈಸೇರದೆ ಪತ್ರಿಕೆ ತಡವಾಗಿ ಹೊರಬರುವುದು ಅನಿವಾರ್ಯವಾಗಿಬಿಡುತ್ತದೆ. ಅನೇಕ ಸಂದರ್ಭಗಳಲ್ಲಿ ಲೇಖಕರನ್ನು ಕೇಳಿಕೊಂಡು ಲೇಖನಗಳನ್ನು ಬರೆಯಿಸುವ ಶ್ರಮವನ್ನೂ ಪತ್ರಿಕೆಯ ಸಂಪಾದಕರು ವಹಿಸಿಕೊಳ್ಳಬೇಕಾಗುತ್ತದೆ. ಇದನ್ನು ಯಶಸ್ವಿಯಾಗಿ ಮಾಡಿಕೊಂಡು ಬರುತ್ತಿರುವ **'ಕರ್ನಾಟಕ ಲೋಚನ'**ದ ಸಂಪಾದಕರಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಹಿಸುವ ಶ್ರದ್ಧೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಷ್ಠಾನದ ಕಾರ್ಯದರ್ಶಿಗಳಲ್ಲೊಬ್ಬರಾದ ಅವರು ಆಯೋಜಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವಿದ್ವಾಂಸರ ದುಂಬಾಲುಬಿದ್ದು ಆದಷ್ಟೂ ಕಾಲಕ್ಕೆ ಸರಿಯಾಗಿ ಪತ್ರಿಕೆ ಹೊರಬರುವಂತೆ ಅವರು ನೋಡಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಅವರ ಬಗ್ಗೆ ಪ್ರತಿಷ್ಠಾನಕ್ಕೆ ವಿಶೇಷ ಮೆಚ್ಚಿಕೆ. ಆಸಕ್ತರು ಈ ಸಂಚಿಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂಬುದು ನನ್ನ ನಂಬಿಕೆ.

–ಡಾ॥ ಪಿ. ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಸಂಪಾದಕೀಯ

'ಕರ್ನಾಟಕ ಲೋಚನ'-ಸಂಪುಟ ೨೭, ಸಂಚಿಕೆ ೦೧, ಜನವರಿ-ಜೂನ್ ೨೦೧೩ ಸಹೃದಯರ ಕೈಗೆ ತಡವಾಗಿ ತಲುಪಲು ಲೇಖನಗಳ ಕೊರತೆಯೇ ಮುಖ್ಯ ಕಾರಣವಾಗಿದೆ. ಲೇಖಕ ಮಿತ್ರರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಸಂಶೋಧನ ಲೇಖನಗಳನ್ನು ಕಳುಹಿಸಿಕೊಡುವ ಕೃಪೆ ಮಾಡಬೇಕೆಂದು ಕೋರುತ್ತೇನೆ. ಈ ಸಂಚಿಕೆಯಲ್ಲಿ ಪ್ರಕಟವಾಗುತ್ತಿರುವ ಲೇಖನಗಳು ವೈವಿಧ್ಯಮಯವೂ ವೈಶಿಷ್ಟ್ಯಪೂರ್ಣವೂ ಆಗಿವೆ; ಮೌಲಿಕ ವಿಚಾರಗಳನ್ನೊಳಗೊಂಡಿವೆ. ಭಾಷೆ, ಸಂಸ್ಕೃತಿ, ಸಂಶೋಧನೆ, ವಿಮರ್ಶೆ, ತೌಲನಿಕ ವಿಚಾರಗಳನ್ನೊಳಗೊಂಡ ಲೇಖನಗಳಲ್ಲಿ ನವೀನ ಆಲೋಚನೆಗಳಿವೆ; ಚರ್ಚೆಗೆ ಕಾರಣವಾಗಬಹುದಾದ ಅನೇಕ ವಿಚಾರಗಳಿವೆ. ಉದಾ: 'ನವ ವಸಾಹತುಶಾಹಿ ಓದು-ಆದಿ ಪುರಾಣ' ಎಂಬ ಡಾ॥ ವಿಜಯಾ ಸುಬ್ಬರಾಜ್ ಅವರ ಲೇಖನ ಇತ್ಯಾದಿ.

ವಿ.ವಿ. ಪುರಂ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ಪ್ರಾಂಶುಪಾಲರೂ ಖ್ಯಾತ ಸಾಹಿತಿಗಳೂ ಜಾನಪದ ತಜ್ಞರೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರೂ ಆಗಿದ್ದ ಪ್ರೊ॥ ಡಿ. ಲಿಂಗಯ್ಯನವರು ದಿನಾಂಕ : ೧೨-೯-೨೦೧೨ ರಂದು ದೈವಾಧೀನರಾದರು. ತೆರವಾದ ಆ ಸ್ಥಾನಕ್ಕೆ ಬೆಂಗಳೂರಿನ ಪ್ರತಿಷ್ಠಿತ ವಿಜಯಾ ಕಾಲೇಜಿನ ನಿವೃತ್ತ ಕನ್ನಡ ಪ್ರಾಧ್ಯಾಪಕರೂ ಖ್ಯಾತ ಸಾಹಿತಿಗಳೂ ಸಾಹಿತಿ ಕಲಾವಿದರ ಬಳಗದ ಮಾಜಿ ಸಂಚಾಲಕರೂ ಹಿಂದೊಮ್ಮೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರೂ ಆಗಿದ್ದ ಡಾ॥ ಪಿ. ವಿ. ನಾರಾಯಣ ಅವರು ಈಗ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿರುವುದು ನಮಗೆಲ್ಲರಿಗೂ ತುಂಬ ಸಂತೋಷದ ವಿಚಾರವಾಗಿದೆ. ಶ್ರೀಯುತರಿಗೆ 'ಕರ್ನಾಟಕ ಲೋಚನ' ಅಭಿನಂದನೆಗಳನ್ನು ಸಲ್ಲಿಸುತ್ತದೆ. ಶ್ರೀಯುತರು ಪ್ರತಿಷ್ಠಾನದ ಅಭಿವೃದ್ಧಿಗೆ ಅನೇಕ ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅವೆಲ್ಲವೂ ಕೈಗೂಡಲಿ ಎಂದು ನಾನು ವೈಯಕ್ತಿಕವಾಗಿ ಹಾರೈಸುತ್ತೇನೆ.

'ಕರ್ನಾಟಕ ಲೋಚನ'ದ ಪ್ರಕಟಣೆಗೆ ಸಹಕರಿಸಿದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮತ್ತೋರ್ವ ಗೌ॥ ಕಾರ್ಯದರ್ಶಿಗಳಾದ ಶ್ರೀ ಎಸ್. ವಿ. ಶ್ರೀನಿವಾಸರಾವ್ ಅವರಿಗೂ, ಕೋಶಾಧಿಕಾರಿಗಳಾದ ಎಂ. ಎಸ್. ರಾಮಪ್ರಸಾದ್ ಅವರಿಗೂ ಕಛೇರಿ ಸಿಬ್ಬಂದಿ ವರ್ಗದವರಿಗೂ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**-ಪ್ರೊ॥ ಜಿ. ಅಬ್ದುಲ್ ಬಷೀರ್**
ಸಂಪಾದಕರು

# ಪರಿವಿಡಿ

# ೧. ಧ್ವನಿಯೆಂಬುದಳಂಕಾರಂ

–ಡಾ॥ ಉಪ್ಪಂಗಳ ರಾಮಭಟ*

ಕವಿರಾಜ ಮಾರ್ಗದ, ಮದ್ರಾಸಿನಲ್ಲಿ ಮುದ್ರಿತವಾದ ಪ್ರಾಚೀನ ಪ್ರತಿಯಲ್ಲಿ (೧೯೨೯) ಪ್ರಕಟವಾದ (ಪುಟ ೧೦೫) ಪದ್ಯದ ಮೊದಲ ಸಾಲು ಇದು. ಅನೇಕ ವಿದ್ವಾಂಸರ ಗಮನಸೆಳೆದ ಈ ಪದ್ಯದ ಬಗೆಗೆ ಇನ್ನಷ್ಟು ಚಿಂತಿಸವುದು ಇಲ್ಲಿನ ಉದ್ದೇಶ.

ಅದರ ಪೂರ್ಣ ಪಾಠ–ಧ್ವನಿಯೆಂಬುದಳಂಕಾರಂ

ಧ್ವನಿಯೆಸುಗುಂ ಶಬ್ದದಿಂದಮರ್ಥದೆ ದೂಷ್ಯಂ
ನೆನೆವುದಿದನಿಂತು ಕಮಳ ದೊಕ
ಳನಿಮಿಷಯುದಮೊಪ್ಪಿತೋರ್ಪುದಿಂತಿದುಚೋದ್ಯಂ
(ಪರಿಚ್ಛೇದ ೩ ಪದ್ಯ ೨೦೯).

ಕವಿರಾಜಮಾರ್ಗದ ಅಲಂಕಾರ ಪ್ರಕರಣದಲ್ಲಿ ಇದು ಕೊನೆಯದಾಗಿವೆ. ಮುಂದೆ ಪ್ರಾಚೀನಾಚಾರ್ಯರ ಮತದಂತೆ ಮಹಾಕಾವ್ಯದ ಲಕ್ಷಣವಿದೆ. ಕವಿರಾಜಮಾರ್ಗಕಾರನಾದ ಶ್ರೀ ವಿಜಯನು ಧ್ವನಿಯನ್ನು ಒಂದು ಅಲಂಕಾರವಾಗಿಯೇ ಪರಿಗಣಿಸಿದ್ದಾನೆ. ಶಬ್ದವೇ ಧ್ವನಿಯನ್ನು ಸೂಚಿಸುತ್ತದೆ. ಅದನ್ನು ವಾಚ್ಯಾರ್ಥವಾಗಿ ಹೇಳಿದರೆ ಅದು ರುಚಿಸುವುದಿಲ್ಲ (ದೂಷ್ಯಂ) ಎಂಬುದನ್ನು ಉದಾಹರಣೆಯಿಂದ ತೋರಿಸಿಕೊಟ್ಟಿದ್ದಾನೆ. ಒಬ್ಬ ಸುಂದರಿಯ ಮುಖದ ವರ್ಣನೆ ಇದು.

ಕಮಲದಲ್ಲಿ ಮೀನ ಜೋಡಿ ಒಪ್ಪಿತೋರುವುದು ಆಶ್ಚರ್ಯಕರ. ಕಮಲದಂತಹ ಮುಖದಲ್ಲಿ ಮೀನುಗಳಂತಹ ಕಣ್ಣುಗಳೆರಡು ಒಪ್ಪಿ ತೋರುತ್ತದೆ. ಕಮಲದಲ್ಲಿ

*ನಿವೃತ್ತ ಪ್ರಾಧ್ಯಾಪಕರು, ಪ್ರೊ॥ ರಾ. ಗೋ. ಸಂಶೋಧನ ಕೇಂದ್ರ, ಅಧ್ಯಕ್ಷರು, ಅಕಲಂಕ ಪ್ರತಿಷ್ಠಾನ, ಉಡುಪಿ, ಪರಾಶರ, ೮೧೬೪ಳ 'ಬಿ' ಸುಧೀಂದ್ರತೀರ್ಥ ಮಾರ್ಗ, ಕುಂಜಬೆಟ್ಟು, ಉಡುಪಿ, ದೂರವಾಣಿ : ೦೮೨೦-೨೫೨೧೯೮.

ಮೀನುಗಳಿರುವುದು ಆಶ್ಚರ್ಯವಲ್ಲವೇ ? ನೀರಿನಲ್ಲಿರಬೇಕಾದ ಮೀನುಗಳು ಕಮಲದಲ್ಲಿವೆ ಯೆನ್ನುವುದು ಚಮತ್ಕಾರ ಇದೇ ಇಲ್ಲಿನ ಸುರಸತೆಗೆ ಕಾರಣ. ಕಮಲದಂತಹ ಮುಖದಲ್ಲಿ ಮೀನಿನಂತಹ ಕಣ್ಣುಗಳ ಎಂದು ಬಿಡಿಸಿ ವಾಚ್ಯಾರ್ಥವನ್ನು ಹೇಳಿದರೆ ಅದು ಧ್ವನಿಯಾಗುವುದಿಲ್ಲ ಎಂದು ಸ್ಪಷ್ಟವಾಗುತ್ತದೆ. ಈ ಉಕ್ತಿ ಚಮತ್ಕಾರದಲ್ಲಿ ಆ ಚೆಲುವೆಯ ಮುಖ ಅದೆಷ್ಟು ಸುಂದರ ಎಂದು ಸಹೃದಯ ಮತ್ತೆ ಮತ್ತೆ ಅದನ್ನು ನೆನೆಯುವಂತಾಗುತ್ತದೆ. ಇದು ಔಪಮ್ಯಮೂಲಕವಾದ ರೂಪಕಾಲಂಕಾರದಿಂದ ಸಿದ್ಧಗೊಂಡಿರುವುದರಿಂದ ಅಲಂಕಾರ ಧ್ವನಿ ಎನ್ನಬಹುದು.

ಆಲಂಕಾರಿಕರು ಧ್ವನಿಯ ಬಗೆಗೆ ಹೆಚ್ಚಿನ ಚಿಂತನೆ ನಡೆಸಿ ವಸ್ತು ಧ್ವನಿ, ಅಲಂಕಾರ ಧ್ವನಿ ರಸಧ್ವನಿಯಲ್ಲದೆ ಅದರ ಅನೇಕ ಪ್ರಭೇದಗಳನ್ನು ನಿರೂಪಿಸಿ ಅದನ್ನು ಹಿಗ್ಗಿಸುವ ಮೊದಲು – ಧ್ವನಿ ಪ್ರಸ್ಥಾನ ನೆಲೆಗೊಳ್ಳುವ ಮೊದಲು ಅದನ್ನು ಅಲಂಕಾರದ ಮೇಲಿನ ಮಟ್ಟದಲ್ಲೇ ಇರಿಸಿಕೊಂಡಿದ್ದರೆನ್ನಬಹುದು. ಧ್ವನಿಯ ಪ್ರಸ್ತಾಪ ಮೊದಲೇ ಇತ್ತು. ಇದನ್ನು ಆನಂದವರ್ಧನನು ತನ್ನ ಗ್ರಂಥದ ಮೊದಲಲ್ಲೇ ನಿವೇದಿಸಿಕೊಂಡಿದ್ದಾನೆ. ಇದರ ಸ್ಥಾನದಲ್ಲೇ ಇದ್ದ 'ವಕ್ರೋಕ್ತಿ ಅಲಂಕಾರ'ದ ಸ್ಥಾನ ಹಿಂದೆಬಿದ್ದು ಧ್ವನಿಯು ಸ್ಥಾನ ಮುಂದಾಯಿತೆನ್ನಬಹುದು.

ಕಾಶ್ಮೀರ ಅನೇಕ ಆಲಂಕಾರಿಕ ವಿದ್ವಾಂಸರಲ್ಲಿ ಆನಂದವರ್ಧನನೇ ಧ್ವನಿಗೆ ಗಟ್ಟಿನೆಲೆ ಕಲ್ಪಿಸಿಕೊಟ್ಟವನು ಎಂಬುದನ್ನು ಅವನ ಮಾತಿನಿಂದಲೇ ತಿಳಿಯಬಹುದು.

ಕಾವ್ಯಸ್ಯಾತ್ಮಾ ಧ್ವನಿರತಿ ಬುಧೈರ್ಯಃ ಸಮಾಮ್ನಾತಪೂರ್ವಃ
ತಸ್ಯಾಭಾವಂ ಜಗದುರಪರೇ ಭಾಕ್ತಮಾದುಸ್ತಮನ್ಯೇ
ಕೇಚಿದ್ವಾಚಾಂ ಸ್ಥಿತಮವಿಷಯೇ ತತ್ವಮೂಚುಸ್ತದೀಯಂ
ತೇನ ಬ್ರೂಮಃ ಸಹೃದಯ ಮನಃ ಪ್ರೀತಯೇ ತತ್ ಸ್ವರೂಪಂ

ಈ ಹಿಂದೆಯೇ ಬುಧರು ಹೇಳಿಕೊಂಡು ಬಂದಿದ್ದ ಧ್ವನಿಯ ಸ್ವರೂಪವನ್ನು ಸ್ಪಷ್ಟವಾಗಿ ಹೇಳುತ್ತೇನೆಂದ ಧ್ವನ್ಯಾಲೋಕದ ಅವನ ಮಾತು ಇದನ್ನು ಹೇಳುತ್ತದೆ. ಕಲ್ಲಟ (೮೫೫–೮೮೩) ಮುಕುಲಭಟ್ಟ (ಕ್ರಿ.ಶ. ೯೦೦) (ಅಭಿಧಾವೃತ್ತಿ ಮಾತೃಕೆ) ಮೊದಲಾದವರು ಧ್ವನಿಯನ್ನು ಪ್ರತಿಪಾದಿಸಿದ್ದರು. 'ದಶರೂಪಕ'ದ ಧನಂಜಯ (೧೦ನೇ ಶ.) ಭಟ್ಟನಾಯಕ ಧನಿಕ ಮೊದಲಾದವರು ಧ್ವನಿಪ್ರತಿಪಾದಕರಲ್ಲ. ಅನಂತರದ ಆಲಂಕಾರಿಕ ಆನಂದವರ್ಧನನೇ ಇದರ ಪ್ರಬಲ ಪ್ರತಿಪಾಕನಾಗಿ ವಿದ್ವಲ್ಲೋಕದಲ್ಲಿ ಅದನ್ನು ನೆಲೆಗೊಳಿಸಿದವನು.

ಕವಿರಾಜಮಾರ್ಗದ ಕರ್ತೃ ಶ್ರೀ ವಿಜಯನ ಆಶ್ರಯದಾತನಾದ ನೃಪತುಂಗನ ಕಾಲದಲ್ಲಿ (ಕ್ರಿ.ಶ. ೮೧೫–೮೭೭) 'ಧ್ವನಿ'ಗೆ ಅಲಂಕಾರದ ಮಟ್ಟವೇ ಇತ್ತು, ಕಾವ್ಯದ

ಆತ್ಮದ ಮಟ್ಟಕ್ಕೆ ಏರಿರಲಿಲ್ಲವೆಂಬುದು 'ಧ್ವನಿಯೆಂಬುದಳಂಕಾರಂ' ಎಂಬ ಕವಿರಾಜ ಮಾರ್ಗದ ಮಾತಿನಿಂದ ಸ್ಪಷ್ಟವಾಗುತ್ತದೆ. ಕುಂತಕನ ವಕ್ರೋಕ್ತಿಃ ಕಾವ್ಯಜೀವಿತಂ' ಎಂಬ ಮಾತಿನ ಮುಂದುವರಿಕೆಯಾಗಿ 'ಕಾವ್ಯಸ್ಯಾತ್ಮಾಧ್ವನಿಃ' ತತ್ವವನ್ನು ಸ್ವೀಕರಿಸಬಹುದು.

ವಿವೇಕ ಬೃಹಸ್ಪತಿಯಾದ ನೃಪತುಂಗನ ನಗರವನ್ನು ಪ್ರವೇಶಿಸಬೇಕಾದರೆ ಅನೇಕ ಶಾಸ್ತ್ರಗಳ ತಿಳವಳಿಕೆಯಿದ್ದವರಿಗೆ ಮಾತ ಸಾಧ್ಯವಿತ್ತೆಂದು ಹೇಳುತ್ತಾನೆ ಶ್ರೀ ವಿಜಯ-

ವ್ಯಾಕರಣ ಕಾವ್ಯ ನಾಟಕ
ಲೋಕಕಳಾಸಮಯದಳಂಕೃತಿಗಳೊಳಂ
ವ್ಯಾಕುಳನಲ್ಲದನೇಕೆ ವಿ-
ವೇಕ ಬೃಹಸ್ಪತಿಯ ನಗರಮಂ ಪುಗುತರ್ಪಂ ॥ ಕ.ಮಾ. ೧-೧೫

ಎಲ್ಲಾ ಶಾಸ್ತ್ರಗಳ ಸಾಲಿನಲ್ಲಿ 'ಅಲಂಕೃತಿ'-ಅಲಂಕಾರ ಶಾಸ್ತ್ರವನ್ನು ಹೆಸರಿಸಿರುವುದು ಈ ಅಲಂಕಾರ ಶಾಸ್ತ್ರಗ್ರಂಥದಲ್ಲಿ ಮುಖ್ಯವಾಗುತ್ತದೆ. ಕವಿರಾಜಮಾರ್ಗಕಾರನು ದಂಡಿ ಭಾಮಹರನ್ನೇ ಹೆಚ್ಚು ಅನುಸರಿಸಿದ್ದಾನೆ. ಉದ್ಭಟನ ಕಾಲದಲ್ಲಿ ಧ್ವನ್ಯಲಂಕಾರಪಂಥವು ಪ್ರಸಿದ್ಧವಾಗಿರಬೇಕೆಂದು ಎಂ.ವಿ. ಸೀತಾರಾಮಯ್ಯನವರು ಅಭಿಪ್ರಾಯಪಟ್ಟಿದ್ದಾರೆ. (ಕವಿರಾಜಮಾರ್ಗ ವಿವಕ್ಷೆ-ಎಂ.ವಿ. ಸೀತಾರಾಮಯ್ಯ, ಪುಟ ೯೮). ಶ್ರೀ ವಿಜಯನು ಆನಂದವರ್ಧನನ ಧ್ವನ್ಯಾಲೋಕವನ್ನು ನೋಡಿರಲು ಸಾಧ್ಯವಿಲ್ಲ. ಅವನ ಹಿಂದಿನ ಅಂದರೆ ಒಂಬತ್ತನೆಯ ಶತಮಾನದ ಹಿಂದಿನವರನ್ನು ಮಾತ್ರ ಗಮನಿಸಿದ್ದಾನೆ.

ಕವಿರಾಜಮಾರ್ಗ ಕಾಲಕ್ಕಿಂತ ಈಚಿನ ಪಂಪರನ್ನಾದಿಗಳು ಕವಿರಾಜಮಾರ್ಗವನ್ನೇ ಅನುಸರಿಸಿರಬೇಕು. ರನ್ನನ್ನು ಹೀಗೆಂದಿದ್ದಾನೆ-ಪದಿನಾರಲ್ಲವಲಂಕ್ರಿಯಾ ರಚನೆ ಮೂವತ್ತಾರು ನೇರ್ಪಟ್ಟುವೊಂದಿ। ದ ಶೃಂಗಾರಮುದಲ್ಲವೊಂದೆ ರಸ ಮೊಂಬತ್ತೆಯ್ದೊಡಂಬಟ್ಟುವೆಂ।ಬುದನೆಂಬನ್ನೆಗಮಂಗನೋಚಿತ ರಸಾಲಂಕಾಮಂ ತಾಳ್ದದೊ।ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೇನ್ನೀ ಮುಖಾಂಭೋಜದೊಳ್। (ಗದಾಯುದ್ಧ-ಆಶ್ವಾಸ ೧, ಪದ್ಯ ೭).

ಇಲ್ಲಿ ಅಲಂಕಾರಗಳು ೩೬, ರಸಗಳು ೯, ಕವಿರಾಜಮಾರ್ಗಕಾರನೂ ೩೬ ಅಲಂಕಾರಗಳು ಎಂದು ಕೊನೆಯದಾಗಿ ಧ್ವನಿ ಅಲಂಕಾರವನ್ನು ಹೇಳಿರುವನು. ಆದ್ದರಿಂದ ಮಾರ್ಗಕಾರನ ಮಾತನ್ನೇ ರನ್ನನು ಅನುಸರಿಸಿದ್ದಾನೆನ್ನಬಹುದು.

ಪಂಪನು ತನ್ನ ಆದಿಪುರಾಣದಲ್ಲಿ ಧ್ವನಿಯನ್ನು ಉಲ್ಲೇಖಿಸಿದ್ದಾನೆ.

ಧ್ವನಿಯೆನಿಸಿದಳಂಕಾರ
ಧ್ವನಿಯೆಸೆವಿನಮೆಸೆವುದಲ್ಲಿ ಮಧುರ ವಿಪಂಚೀ

ಧ್ವನಿಯೊಡನನೇಕರಾಗ
ಧ್ವನಿಯೆನೆ ಸೊಗಯಿಪುದು ಕಿನ್ನರಧ್ವನಿನಗದೊಳ್॥ (೯-೧೧೯)
ಕಾವ್ಯದಲ್ಲಿ ಧ್ವನಿ ಶೋಭಿಸುವಂತೆ ಮಧುರವೀಣಾನಾದದೊಡನೆ

ಅನೇಕ ಧ್ವನಿ ಸೇರಿದಂತೆ ವಿಜಯಾರ್ಧ ಪರ್ವತದ ಕಿನ್ನರ ಧ್ವನಿ ಸೊಗಯಿಸುತ್ತದೆ. ಪ್ರಕೃತಿಯ ವರ್ಣನೆಯಲ್ಲಿ ಪ್ರಕೃತಿಯ ಧ್ವನಿಗೆ ಕಾವ್ಯದ ಧ್ವನಿಯನ್ನು ಹೋಲಿಸಿರುವುದು ಗಮನಾರ್ಹ. ಪಂಪನು ಕಾವ್ಯದಲ್ಲಿ ಧ್ವನಿಯ ಮಹತ್ವವನ್ನು ಸೂಚಿಸಿದ್ದಾನೆ.

ಪಂಪನು ವಕ್ರೋಕ್ತಿಯ ಹಿರಿಮೆಯನ್ನೂ ತನ್ನ ಆದಿಪುರಾಣದಲ್ಲಿ ನಿರೂಪಿಸಿದ್ದಾನೆ. ಕುಂತಕನು"ವಕ್ರೋಕ್ತಿಃಕಾವ್ಯ ಜೀವಿತಮ್"-ವಕ್ರೋಕ್ತಿಯೇ ಕಾವ್ಯದ ಜೀವ ಎಂಬಷ್ಟು ಅದನ್ನು ಏರಿಸಿದ್ದಾನೆ.

ಪಂಪನ ಆದಿಪುರಾಣದಲ್ಲಿ-
ಕಿವಿಯಂ ಬಗೆವುಗುವೊಡೆಕೊಂ-
ಕುವೆತ್ತ ಪೊಸ ನುಡಿಯೆ ಪುಗುಗುಮುಳಿದುದು ಸಜುಸ್ಸೆ
ತವಚಜನೆ ಮಾಡಿ ಸಜುಸ್ಸೆ
ತು ವೋ ಕುತು ಮೇಂ ಬಗೆಯ ಬಟ್ಟೆಯಂ ಮುಟ್ಟುಗುಮೇ

(ಪಂಪ ಕವಿ ವಿರಚಿತಂ ಆದಿಪುರಾಣಂ - ಸಂ. ಎಚ್. ಜಿ. ನರಸಿಂಹಾಚಾರ್ ೧೯೯೫ ೨ನೇ ಮುದ್ರಣ ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ-ಕನ್ನಡ ಸಂಸ್ಕೃತಿ ನಿರ್ದೇಶನಾಲಯ) ಕೊಂಕು ನುಡಿ ಬಗೆವುಗುತ್ತದೆ. ಉಳಿದುದು ನೇರವಾಗಿ ಬೇಸರ ಹುಟ್ಟಿಸಿ ಪರಿಣಾಮ ಬೀರದೆ ನೇರವಾಗಿ ಹೋಗುತ್ತದೆ. ವಕ್ರೋಕ್ತಿ ಕಾವ್ಯ ಶ್ರೇಷ್ಠವೆಂಬ ಪಂಪನ ಅಭಿಪ್ರಾಯ ಇಲ್ಲಿ ಸ್ಪಷ್ಟವಾಗುತ್ತದೆ. ಕವಿರಾಜಮಾರ್ಗಕಾರನು ಕಾವ್ಯದ ಭಾಷೆ ಶೈಲಿ ಬಗೆಗೆ-ದೇಸಿಸಮಸಂಸ್ಕೃತ ತದ್ಭವಗಳ ಬಳಕೆಗೆ ಹೇಳಿದ ಮಾತನ್ನೇ ಪಂಪನು ತನ್ನ ವಿಕ್ರಮಾರ್ಜುನ ವಿಜಯದ ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊಪ್ಪುಗುಂ ಎಳಮಾವು ಕೆಂದಳಿರ ಪೂವಿನ ಬಿಣ್ಪೊರೆಯಿಂಬಳಲ್ದು ತುಂಬಿಗಳನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆ ವೋಲ್ (ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ-೧೯೭೬, ೧-೮)) ಕವಿರಾಜಮಾರ್ಗಕಾರನ ಧ್ವನಿ ತತ್ವವನ್ನು ಒಪ್ಪಿಕೊಂಡಂತೆ ದೇಸಿ ಮುಖ್ಯವಾದ ಸರಳ ಶೈಲಿಯನ್ನು ಪಂಪನು ಸ್ವೀಕರಿಸಿ ಪ್ರಯೋಗವನ್ನು ಮಾಡಿದ್ದಾನೆ.

ಧ್ವನಿಯು ಅಲಂಕಾರವಾಗಿದ್ದಂತೆ ರಸವೂ ರಸವದಲಂಕಾರ ಎನಿಸಿಕೊಂಡಿತ್ತು. ಆಲಂಕಾರಿಕರ ಚಿಂತನೆ ಚರ್ಚೆಗಳು ಹೆಚ್ಚಿದಂತೆ ಧ್ವನಿಗೂ ರಸಕ್ಕೂ ಪ್ರತ್ಯೇಕ ಪ್ರಧಾನ ಸ್ಥಾನಗಳೇ ಸಿಕ್ಕಿದವು. ಯಾವ ಹೆಸರಿನಿಂದ ಕರೆದರೂ ಅಲಂಕಾರ ಧ್ವನಿ ರಸಗಳೂ ಕಾವ್ಯದ ಶೋಭೆಯನ್ನು ಹೆಚ್ಚಿಸುವ ಅಂಶಗಳೇ.

ಆಧಾರಗಳು :

೧. ಭಾರತೀಯ ಕಾವ್ಯ ಮೀಮಾಂಸೆ; ತೀ.ನಂ.ಶ್ರೀ. ಕನ್ನಡ ಸಂಸ್ಕೃತಿ ಇಲಾಖೆ ೧೯೭೨ .

೨. ಪಂಪ ಭಾರತಂ ಎಂಬ ವಿಕ್ರಮಾರ್ಜುನ ವಿಜಯಂ ೧೯೭೬.

೩. ಪಂಪಕವಿ ವಿರಚಿತಂ ಆದಿಪುರಾಣಂ–ಕನ್ನಡ ಸಂಸ್ಕೃತಿ ನಿರ್ದೇಶನಾಲಯ ೧೯೯೫.

೪. ಕರ್ನಾಟಕ ಕವಿರಾಜ ಮಾರ್ಗಂ–University Oriental. Research Institute, Madras, 1930.

೫. ಕವಿರಾಜಮಾರ್ಗ ವಿವಕ್ಷೆ–ಎಂ.ವಿ.ಸೀತಾರಾಮಯ್ಯ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೫.

೬. ಶ್ರೀವಿಜಯ ಕೃತ ಕವಿರಾಜಮಾರ್ಗಂ–ಸಂ. ಎಂ. ವಿ. ಸೀತಾರಾಮಯ್ಯ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೧೯೯೪.



ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ–ಜೂನ್, ೨೦೧೩

# ೨. ನಾಗವರ್ಮನ ಚಂದ್ರರಾಜ ಗ್ರಂಥ

–ಪ್ರೊ|| ಜಿ. ವೆಂಕಟಸುಬ್ಬಯ್ಯ*

ಕನ್ನಡ ನಾಡಿನಲ್ಲಿ ಲೇಖಕಿಯರು ಹಾಗೆಯೇ ಯುವಕರು ಹೊಸರೀತಿಯನ್ನು ಬರವಣಿಗೆಯಲ್ಲಿ ತಂದಿದ್ದಾರೆ. ಇಂಥ ಸಮಯದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ವಿಚಾರಸಂಕಿರಣದ ಸಭೆಯಲ್ಲಿ ಬಿಡುಗಡೆಯಾದ 'ನಾಗವರ್ಮನ ಚಂದ್ರರಾಜ' ಗ್ರಂಥವನ್ನು ಕುರಿತು ಮಾತನಾಡುವ ಅವಕಾಶವನ್ನು ನೀಡಿದ್ದಾರೆ.

ನಾನು ಮಾತನಾಡುವುದು ವಿದ್ವತ್ತನ್ನು ಕುರಿತದ್ದು; ಸಂಶೋಧನೆಯನ್ನು ಕುರಿತದ್ದು. ಈಹೊತ್ತು ಯಾವ ವಿಷಯವನ್ನು ಕುರಿತು ಮಾತನಾಡುತ್ತಿದ್ದೇನೋ ಇದು ಕನ್ನಡ ನಾಡಿನ ಪ್ರಸಿದ್ಧ ವಿದ್ವಾಂಸರ ಜೊತೆ ಪರಸ್ಪರ ಚರ್ಚೆ ಮಾಡಿದ ವಿಷಯ. ಶ್ರೀ ಆರ್. ನರಸಿಂಹಚಾರ್ ಅವರು, ಡಾ|| ಎ. ವೆಂಕಟಸುಬ್ಬಯ್ಯನವರು, ಮೈಸೂರಿನ ಜೋಯಿಸ್ ಇವರೆಲ್ಲಾ ತುಂಬಾ ಆಳವಾದ ಪ್ರವಾಚಕರು. ಇವರು ನಮ್ಮ ಕವಿಗಳ ಕಾಲಮಾನದ ಬಗ್ಗೆ ಚರ್ಚೆಮಾಡುತ್ತಲಿದ್ದರು. ಕವಿಗಳು ಯಾವ ಕಾಲದಲ್ಲಿ ಬದುಕಿದ್ದರು, ಅವರ ಚರಿತ್ರೆಯೇನು ? ತಂದೆ ತಾಯಿ ಯಾರು ? ಅವರು ಬರೆದ ಗ್ರಂಥಗಳು ಯಾವುವು ? ಈ ಬಗ್ಗೆ ಚರ್ಚೆ ಮಾಡುತ್ತಿದ್ದ ಕಾಲ. ಕವಿಗಳ ಕಾಲನಿರ್ಧಾರ ಮಾಡುವಾಗ ಶತಮಾನಗಳಷ್ಟು ವ್ಯತ್ಯಾಸವಾಗುತ್ತಿದ್ದಿತು. ಕವಿಗಳ ಕಾಲನಿರ್ಣಯ ಕಷ್ಟವಾಗಿದ್ದಿತು.

ಅಂತಹ ಕಾಲದಲ್ಲಿ ಕವಿಗಳ ಗ್ರಂಥಗಳಲ್ಲಿ ಕವಿಗಳು ಸೂಚಿಸಿದ ಕಾಲಗಣನೆ ಅಂಕಿಗಳಲ್ಲಿರದೆ ಶಬ್ದಸೂಚೀ ಸಂಖ್ಯಾಗಣನೆಯ ಮಾರ್ಗವಾಗಿದ್ದಿತು. ಅದನ್ನು ಓದುವ ಕ್ರಮವೂ ವಿಶಿಷ್ಟವಾಗಿ ಓದುಗರಿಗೆ ತುಂಬ ಇಕ್ಕಟ್ಟಾದ ಪರಿಸ್ಥಿತಿ. ಆದರೆ ವಿದ್ವಾಂಸರು ಏನು ತೀರ್ಮಾನ ಮಾಡಿದರೂ ಅವರಲ್ಲಿ ಯಾರನ್ನು ಒಪ್ಪಬೇಕು ಎಂಬುದು ಕಷ್ಟವಾಗಿದ್ದಿತು. ಹೀಗೆ ಚರ್ಚೆಯಾಗುತ್ತಿದ್ದ ಕಾಲದಲ್ಲಿ ಕವಿಗಳನ್ನು ಕುರಿತ ವರ್ಣನೆಯ

* ನಂ. ೫೮, ೩೧ನೇ ಅಡ್ಡರಸ್ತೆ, ೭ನೇ ಬ್ಲಾಕ್, ಜಯನಗರ, ಬೆಂಗಳೂರು–೮೨

ಸಮಯದಲ್ಲಿ ಕವಿಗಳ ಪ್ರಾಧಾನ್ಯವನ್ನು ಕಂಡುಹಿಡಿಯುವುದಕ್ಕೆ ಎಷ್ಟು ಮಂದಿ ವಿದ್ವಾಂಸರು ಹೊಗಳಿದ್ದಾರೆ ಎಂಬ ಲೆಕ್ಕಾಚಾರವನ್ನು ಇಟ್ಟುಕೊಂಡಿರೋದಿತ್ತು.

'ಪಂಪನ ಹೆಸರನ್ನು ಹಿಂದುಮುಂದಾಗಿ ಹೇಗೆ ಓದಿದರೂ 'ಪಂಪ'ನೆ. ಅವನನ್ನು ಅಲುಗಾಡಿಸಲಾಗದು. ಆದ್ದರಿಂದ ಗಟ್ಟಿಕವಿ ಎಂದಂದುಕೊಂಡದ್ದು. ರನ್ನರನ್ನನೇ, ಅವನನ್ನು ಬಿಟ್ಟರೆ ಇನ್ನಿಲ್ಲ. ಸರಸ್ವತಿಯ ಶಬ್ದಭಂಡಾರವನ್ನೇ ಮುಚ್ಚಿಟ್ಟುಕೊಂಡಿದ್ದನು ಎಂದು ಅವರನ್ನು ಹೊಗಳಿದ್ದಾರೆ; ಕೊಂಡಾಡಿದ್ದಾರೆ. ಕವಿಗಳೇ ತಮ್ಮನ್ನು ಹೊಗಳಿಕೊಂಡದ್ದು ಬೇಕಾದಷ್ಟಿದೆ. ಈ ಸಂದರ್ಭದಲ್ಲಿ ಯಾರು ಯಾರು ಯಾವ ಯಾವ ಕಾಲದಲ್ಲಿ ಇದ್ದರು ಅನ್ನುವುದನ್ನು ಚರ್ಚೆ ಮಾಡುವಾಗ ನಾಗವರ್ಮನ ವಿಚಾರದಲ್ಲಿ ತುಂಬಾ ಚರ್ಚೆ ಬರುತ್ತದೆ. ಆತನು ಬರೆದಿರುವ ಅನೇಕ ಗ್ರಂಥಗಳಲ್ಲಿ ಛಂದೋಂಬುಧಿ ಮತ್ತು ಕಾದಂಬರಿ ಇವೆರಡನ್ನೂ ನಾಗವರ್ಮನೇ ಬರೆದಿದ್ದನೆಂತಲೂ ಮಿಕ್ಕಿದ್ದೆಲ್ಲಾ ಬೇರೊಬ್ಬನು ಬರೆದದ್ದು. ಇಬ್ಬರು ನಾಗವರ್ಮ ಎಂದು ಶ್ರೀ ಆರ್. ನರಸಿಂಹಚಾರ್ಯರು ತೀರ್ಮಾನ ಮಾಡಿದ್ದರು. ಇಲ್ಲಿಯ ತನಕ ಒಪ್ಪಿಕೊಂಡಿದ್ದೆವು. ಪ್ರೊ|| ಸಿ. ಮಹಾದೇವಪ್ಪನವರು* ಇಂತಹ ವಿಷಯಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಇವರನ್ನು ವಿದ್ಯಾರ್ಥಿ ದೆಸೆಯಿಂದ ಬಲ್ಲೆ. ಅವರು ವಿದ್ಯಾರ್ಥಿಯಾಗಿದ್ದಾಗ ನಾನು ಮೈಸೂರು ಮಹಾರಾಜರ ಕಾಲೇಜಿನ ಉಪನ್ಯಾಸಕ. ಆಗಲೂ ಕೂಡ ಆಳವಾಗಿ ಅಭ್ಯಾಸ ಮಾಡುವ ವಿದ್ಯಾರ್ಥಿಯಾಗಿದ್ದರು. ಸಂಶೋಧನೆಯಲ್ಲಿ ವ್ಯಾಕರಣ, ಛಂದಃಶಾಸ್ತ್ರಗಳಲ್ಲಿ ತುಂಬಾ ಆಸಕ್ತಿಯಿಂದ ಅಭ್ಯಾಸ ಮಾಡುತ್ತಿದ್ದರು. ಕನ್ನಡ ಬಿ. ಎ. ಆನರ್ಸ್‌ನಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿ ಅಧ್ಯಾಪಕರಾದರು. ಉಪನ್ಯಾಸಕ ವಿದ್ಯಾರ್ಥಿಯಾಗಿ ಎಂ.ಎ. ಪಾಸ್ ಮಾಡಿ ಕಡೆಗೆ ಪ್ರಾಧ್ಯಾಪಕರಾಗಿ, ಕಾಲೇಜಿನ ಪ್ರಿನ್ಸಿಪಾಲರಾಗಿ ನಿವೃತ್ತರಾದರು. ಅವರು ತಮ್ಮ ಎಲ್ಲ ಸಂಶೋಧನೆಗಳನ್ನು ಸೇರಿಸಿ 'ನಾಗವರ್ಮನ ಚಂದ್ರರಾಜ' ಎಂಬ ಈ ಗ್ರಂಥವನ್ನು ಪ್ರಕಟಣೆ ಮಾಡಿದ್ದಾರೆ. ಅದನ್ನು ಎಲ್ಲರೂ ಒಪ್ಪಿಕೊಳ್ಳುವ ಮುನ್ನ ಚರ್ಚೆಯಾಗಲಿ ಎಂಬುದು ಮಹಾದೇವಪ್ಪನವರ ಉದ್ದೇಶ. ನಾಗವರ್ಮ ಒಬ್ಬನೆ, ಇಬ್ಬರಲ್ಲ ಎಂದು ಅವರು ಕೊಟ್ಟಿರುವ ತೀರ್ಮಾನ ಮಹತ್ವದ್ದು. ನಾನು ಒಪ್ಪಿಕೊಂಡಿದ್ದೇನೆ. ಡಾ|| ಕೆ. ಕೃಷ್ಣಮೂರ್ತಿ, ಸಂಸ್ಕೃತ ವಿದ್ವಾಂಸರು, ದೊಡ್ಡ ವಿದ್ವಾಂಸರು. ಅವರು ಕೂಡ ಒಪ್ಪಿಕೊಂಡಿದ್ದಾರೆ.

ನಾವು ಏನು ಮಾಡಬೇಕೆಂದರೆ ವಿದ್ವತ್ ಮಾರ್ಗದಲ್ಲಿ ವಿಶ್ವವಿದ್ಯಾಲಯಗಳಲ್ಲಿ ವಿದ್ವಾಂಸರಾದವರು ವಿದ್ಯಾರ್ಥಿಗಳ ಎದುರಿಗೆ ಚರ್ಚೆಮಾಡಿ ಕೊಟ್ಟಿರುವ ಕಾರಣಗಳು ಸರಿಯಾಗಿವೆ ಎಂದು ಒಪ್ಪಿಕೊಳ್ಳಿ ಅಥವಾ ಕಾರಣಗಳನ್ನು ಕೊಟ್ಟು ಈ ತೀರ್ಮಾನವನ್ನು

---

* ಪ್ರೊ|| ಸಿ. ಮಹಾದೇವಪ್ಪ. ಬೆಂಗಳೂರು ಸಂಶೋಧನ ಕೋಟೆ. ನಂ. ೧೯೭. ೫ನೇ ಮುಖ್ಯರಸ್ತೆ. ವೈಯಾಲಿಕಾವಲ್. ಬೆಂಗಳೂರು–೫೬೦ ೦೦೩.

ನಾವು ಒಪ್ಪುವುದಿಲ್ಲ ನರಸಿಂಹಚಾರ್ಯರು ಹೇಳಿದ್ದೇ ಸರಿ ಎಂದು ಹೇಳಿ. ಆದರೆ ಬರೀ ಮಾತನಾಡದೆ ಅದನ್ನು ಬರವಣಿಗೆಯಲ್ಲಿ ಬರೆದು ವಿದ್ಯಾರ್ಥಿಗಳಿಗೆ ತಿಳಿಸಬೇಕು. ಆವಾಗ ಸಂಶೋಧನೆಯಲ್ಲಿ ತೀರ್ಮಾನವನ್ನು ಮಾಡುವ ಮಾರ್ಗ ಯಾವುದು ಎಂದು ತಿಳಿಯುತ್ತದೆ. ಬರವಣಿಗೆ ಸ್ಪಷ್ಟವಾಗಿರಬೇಕು. ಬರವಣಿಗೆ ಸ್ಪಷ್ಟವಾಗಿರುವುದಕ್ಕೆ ಆಲೋಚನೆ ಸ್ಪಷ್ಟವಾಗಿರಬೇಕು. ಒಳ್ಳೆಯ ಭಾಷೆ ಇದ್ದಾಗ ಅದು ಮನಸ್ಸಿಗೆ ಒಪ್ಪಿಗೆಯಾಗುತ್ತದೆ. ಸಂಶೋಧನೆ ಬರೀ ಈ ವಿಷಯಕ್ಕೇ ಅಲ್ಲ. ಉದಾಹರಣೆಗೆ ಕುಮಾರವ್ಯಾಸನ ಗ್ರಂಥದ ಬಗ್ಗೆಯೂ ಸಂಶೋಧನೆಯಾಗಬೇಕು. ಅದು ತಿದ್ದುಪಾಡಾಗಬೇಕಾದರೆ ವರ್ಷವೆ ಆಯಿತು. ಆದ್ದರಿಂದ ಸಂಶೋಧನೆ ಎಂದೂ ಇದ್ದದ್ದೆ.

ಸಂಶೋಧನ ಕ್ಷೇತ್ರದಲ್ಲಿ ಗಾಢವಾಗಿ ಅಭ್ಯಾಸ ಮಾಡಬೇಕು. ಗ್ರಂಥಸಂಪಾದನೆಯ ಮಾರ್ಗವನ್ನು ತಿಳಿದುಕೊಳ್ಳಬೇಕು. ಅದಕ್ಕೆ ಸಿ. ಮಹಾದೇವಪ್ಪನವರ 'ನಾಗವರ್ಮನ ಚಂದ್ರರಾಜ' ಸಹಾಯ ಮಾಡುತ್ತದೆ. ಓದುವುದೂ ಯಾವ ರೀತಿಯಲ್ಲಿ ಎಂಬುದೂ ಅರಿವಾಗುತ್ತದೆ. ಸಂಸ್ಕೃತ ಭಾಷೆಯ ಒಳಗಡೆ ಒಂದು ಶಬ್ದಕ್ಕೆ ನಾಲ್ಕಾರು ಅರ್ಥಗಳಿರುತ್ತವೆ. ಯಾವ ಅರ್ಥವನ್ನು ತೆಗೆದುಕೊಳ್ಳಬೇಕು ಎಂಬ ಕಷ್ಟವಿದೆ. ಆದ್ದರಿಂದ ಹಿರಿಯ ಕವಿಗಳ ಮಹತ್ವದ ಗ್ರಂಥಗಳ ಪರಿಚಯವಿರಬೇಕಾಗುತ್ತದೆ. ಅನೇಕ ವರ್ಷಗಳ ಅಭ್ಯಾಸ ಅಗತ್ಯ. ಈ ನನ್ನ ವಯಸ್ಸಿನಲ್ಲಿ ಕೂಡ ನನಗೇನೂ ತಿಳಿದಿಲ್ಲ ಅನಿಸುತ್ತದೆ. ಅಷ್ಟೊಂದು ವಿಸ್ತಾರವಾದದ್ದು ಈ ಸಂಶೋಧನೆಯ ಕ್ಷೇತ್ರ. ಆ ದೆಸೆಯಿಂದ ನಾಗವರ್ಮನ ಚಂದ್ರರಾಜ ಗ್ರಂಥದ ಬಿಡುಗಡೆಯಾದ ಮೇಲೆ ಈ ಗ್ರಂಥದಲ್ಲಿ ಮಹಾದೇವಪ್ಪನವರ ಸಂಶೋಧನೆಯಲ್ಲಿ ಏನು ಹೇಳಿದ್ದಾರೋ ಅದೆಲ್ಲಾ ಸರಿಯಾದ ಮಾರ್ಗದಲ್ಲಿ ನಡೆದಿದೆ. ಆ ತೀರ್ಮಾನವನ್ನು ವಿಶ್ವವಿದ್ಯಾಲಯದಲ್ಲಿ ವಿದ್ವಾಂಸರು ಓದಿ ಅವರು ತಮ್ಮ ತೀರ್ಮಾನವನ್ನು ಬರವಣಿಗೆಯ ಮೂಲಕ ತಿಳಿಸಬೇಕೆಂಬುದು ಮಹಾದೇವಪ್ಪನವರ ಉದ್ದೇಶ. ಅದಕ್ಕೋಸ್ಕರ ಸೆಮಿನಾರ್ ಚರ್ಚೆಯನ್ನು ಪ್ರಯತ್ನಪಟ್ಟು ಏರ್ಪಡಿಸಿದ್ದಾರೆ. ನಾನು ನಿಮ್ಮಲ್ಲಿ ವಿಜ್ಞಾಪನೆ ಮಾಡಿಕೊಳ್ಳುವುದೇನಂದರೆ ಅಧ್ಯಾಪಕರು ಶಿಷ್ಯರು ಗ್ರಂಥವನ್ನು ಓದಿ ಅದರಲ್ಲಿರತಕ್ಕದ್ದನ್ನು ಸರಿ ಎಂದು ತಿಳಿದರೆ ಸರಿ ಎಂದು ಹೇಳಿ, ತಪ್ಪಿದ್ದರೆ ಏನು ತಪ್ಪು ಎಂದು ಸರಿಯಾದ ಕಾರಣ ಕೊಟ್ಟು ನಿಮ್ಮ ಅಭಿಪ್ರಾಯವನ್ನು ತಿಳಿಸಿ ಎಂಬುದೆ. ಮತ್ತೇನಿಲ್ಲ.

---

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ದಿನಾಂಕ ೨೨–೧೨–೨೦೧೧ರ ಗುರುವಾರ ಬೆಂಗಳೂರು ಸೆಂಟ್ರಲ್ ಕಾಲೇಜಿನ ಸೆನೆಟ್ ಸಭಾಂಗಣದಲ್ಲಿ ಕುಲಸಚಿವ ಡಾ॥ ಜಿ. ಸಿ. ಮೈಲಾರಪ್ಪನವರು "ನಾಗವರ್ಮನ ಚಂದ್ರರಾಜ" ಗ್ರಂಥವನ್ನು ಬಿಡುಗಡೆ ಮಾಡಿದ ಸಂದರ್ಭದಲ್ಲಿ ಗ್ರಂಥದ ಬಗೆಗೆ ಪರಮಪೂಜ್ಯ ಶ್ರೀ ಪ್ರಾಧ್ಯಾಪಕ ಜಿ. ವೆಂಕಟಸುಬ್ಬಯ್ಯ ಅವರು ಮಾಡಿದ ಭಾಷಣದ ಸಾರಸಂಗ್ರಹ ಮಾಡಿದವರು ಪ್ರೊ॥ ಸಿ. ಮಹಾದೇವಪ್ಪ ■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೩. ಹಾಸನಜಿಲ್ಲೆ ಹೊಳೇನರಸೀಪುರ ತಾಲ್ಲೂಕು ಗುಬ್ಬಿ ಗ್ರಾಮದ ತಾಮ್ರಶಾಸನದ ಪ್ರಕಟಿತ ನಕಲು ಪ್ರತಿಯ ನೈಜತೆ-ಕಿರು ಟಿಪ್ಪಣಿ

-ಎಸ್. ಕಾರ್ತಿಕ್*

ಕರ್ನಾಟಕ ರಾಜ್ಯದ ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ದೊಡ್ಡಕಾಡನೂರು ಹೋಬಳಿಯ ಗುಬ್ಬಿ ಗ್ರಾಮದಲ್ಲಿದ್ದ ಮೈಸೂರು ಪುಟ್ಟಪ್ಪನವರ ಮಗ ಶ್ರೀಕಂಠಯ್ಯನವರ ವಶದಲ್ಲಿದ್ದ ತಾಮ್ರಶಾಸನದ ನಕಲು ಪ್ರತಿ ಮೊದಲ ಬಾರಿಗೆ ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ-೧೫, ಹಾಸನ ಜಿಲ್ಲೆಯ ಪುರವಣಿ ಸಂಪುಟದಲ್ಲಿ ಪ್ರಕಟವಾಗಿದೆ. (Published by M. H. Krishna, ಮೈಸೂರು ಪುರಾತತ್ತ್ವ ಇಲಾಖೆ-೧೯೪೩, ಹೊಳೇನರಸೀಪುರ-೧೨೩, ಪುಟ ೧೪೯-೧೫೧). ಇಲ್ಲಿನ ಪ್ರಕಟಣೆಗೆ ಮೊದಲೇ ೧೯೧೩ ರ ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಸಾರಾಂಶ ಮಾತ್ರವಾಗಿ ದಾಖಲಾಗಿದೆ. ಇದು ತಾಮ್ರಶಾಸನದ ನಕಲು ಪ್ರತಿಯಾದ ಕಾರಣ ಪರಿಷ್ಕೃತ ಎಪಿಗ್ರಾಫಿಯ ಕರ್ನಾಟಿಕ ಹಾಸನ ಜಿಲ್ಲೆಯ ಸಂಪುಟಗಳಲ್ಲಿ ಹಾಗೂ ಇತರ ಯಾವುದೇ ವಿಜಯನಗರ ಶಾಸನಸಂಪುಟಗಳಲ್ಲಿ ಸೇರ್ಪಡೆಯಾಗಿಲ್ಲ. ಈ ಶಾಸನವು ವಿಜಯನಗರ ಸಾಮ್ರಾಜ್ಯದ ದೊರೆಯಾಗಿದ್ದ ಸಂಗಮ ವಂಶದ ಇಮ್ಮಡಿ ಹರಿಹರನದ್ದಾಗಿದ್ದು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ರಚಿತವಾದ ಒಂದು ದಾನಶಾಸನವಾಗಿದೆ. ಆದರೆ ಸಂಸ್ಕೃತ ಭಾಷೆಯು ತುಂಬಾ ಸ್ಖಾಲಿತ್ಯಗಳಿಂದ ಕೂಡಿದೆ. ಈ ಶಾಸನವು ಕೆಲವು ಅಂಶಗಳಲ್ಲಿ ಕುತೂಹಲಕಾರಿಯಾದುದಾಗಿದ್ದು ಕೂಟ ಶಾಸನವೆಂದು ಸಂದೇಹಿಸಲು ಆಸ್ಪದವಿದೆ. ಇದರ ಬಗೆಗೆ ಈ ಮೊದಲೇ ಬಾ. ರಾ. ಗೋಪಾಲ ಅವರು ಹೇಳಿದ್ದರೂ ಸಮರ್ಪಕವಾಗಿ ವಿವರಣೆ ನೀಡಿರುವುದಿಲ್ಲ. ಆದ ಕಾರಣ ಪ್ರಕೃತ

---

*ನಂ. ೬೫. (೧ನೆಯ ಮಹಡಿ). ೩ನೆಯ ಅಡ್ಡರಸ್ತೆ. ಶಿಕ್ಷಕರ ಬಡಾವಣೆ. ೧ನೆಯ ಹಂತ. ಜೆ.ಪಿ. ನಗರ ಅಂಚೆ. ಬೆಂಗಳೂರು-೫೬೦ ೦೭೮.

ಲೇಖನದಲ್ಲಿ ಶಾಸನೋಕ್ತ ವಿವರಗಳ ಬಗೆಗೆ ವಿವೇಚಿಸದೆ ಈ ತಾಮ್ರಶಾಸನದ ನಕಲು ಪ್ರತಿಯ ನೈಜತೆಯನ್ನು ಕುರಿತು ಮಾತ್ರ ಯಥಾಮತಿಯಾಗಿ ಕಿರಿದಾಗಿ ವಿಚಾರ ಮಾಡಲಾಗಿದೆ. (ಶಾಸನೋಕ್ತ ವಿವರಗಳ ಬಗೆಗೆ ಹೆಚ್ಚಿನ ಮಾಹಿತಿಗೆ ೧೯೧೩ ರ ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯನ್ನು (ಪುಟ ೪೩) ಗಮನಿಸಬಹುದಾಗಿದೆ.)

**ಶಾಸನದ ಕಾಲ ಮತ್ತು ಇತರ ಅಂಶಗಳು :** ಈ ಶಾಸನದಲ್ಲಿ ಕಾಲವನ್ನು ಕಟಪಯಾದಿ ವಿಧಾನ ಮತ್ತು ಅಂಕೆಗಳೆರಡರಲ್ಲಿಯೂ 'ಸ್ವಸ್ತಿಶ್ರೀ ಗಂಗಾಖ್ಯೇ ೧೩೩೨ ಶಕಾಬ್ದೇ ದುರ್ಮತಿ ಸಂವತ್ಸರೇ ವೈಶಾಖೇ ಶುಕ್ಲಪ್ರತಿಪದಿ ಭಾರ್ಗವವಾಸರೇ' ಎಂದು ಶಕವರ್ಷದಲ್ಲಿ ಸೂಚಿಸಲಾಗಿದೆ. ಶುಕ್ಲ ಪ್ರತಿಪದಿ ಎಂದರೆ ಶುಕ್ಲಪಕ್ಷದ ಪಾಡ್ಯಮೀ ಎಂದು. ಭಾರ್ಗವವಾಸರೇ ಎಂದರೆ ಶುಕ್ರವಾರ. ಇಲ್ಲಿ ಶ್ರೀಗಂಗಾಖ್ಯೇ ಎಂಬುದು ಕಟಪಯಾದಿ ಸಂಖ್ಯಾವಾಚಕ ಶಬ್ದವಾಗಿದೆ. ಇವುಗಳನ್ನು ಕೆಳಗೆ ವಿವೇಚಿಸಲಾಗಿದೆ.

೧. ಶಕ ೧೩೩೨ (=ಕ್ರಿ.ಶ. ೧೪೧೦-೧೪೧೧) ದುರ್ಮತಿ ಸಂವತ್ಸರವೇ ಇರುವುದಿಲ್ಲ. ಬದಲಾಗಿ ವಿಕೃತಿ ಸಂವತ್ಸರ ಇರುತ್ತದೆ. ಜೊತೆಗೆ ಕಟಪಯಾದಿ ಸಂಖ್ಯಾವಾಚಕ ಮತ್ತು ಅಂಕೆಗಳಲ್ಲಿ ಸೂಚಿಸಿರುವ ಶಕ ೧೩೩೨ ರಲ್ಲಿ ಇಮ್ಮಡಿ ಹರಿಹರನ (ಕ್ರಿ.ಶ. ೧೩೭೭-೧೪೦೪) ಆಳ್ವಿಕೆ ಮುಗಿದು ಅವನ ಮಗನಾದ ಒಂದನೆಯ ದೇವರಾಯನು (ಕ್ರ.ಶ. ೧೪೦೬-೧೪೨೨) ರಾಜ್ಯಭಾರ ಮಾಡುತ್ತಿರುತ್ತಾನೆ. ಈ ಕಾರಣಕ್ಕಾಗಿಯೇ ೧೯೧೩ ರ ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ (ಪುಟ೪೩) ಕಾಲ ತಪ್ಪಾಗಿ ಲಿಖಿತವಾಗಿದೆ ಎಂದು ಸೂಚಿಸಿ ಕ್ರಿ.ಶ. ೧೩೮೧ ಎಂದು ಶಾಸನದ ಕಾಲವನ್ನು ಹೇಳಲಾಗಿದೆ. ಇದನ್ನು ಗಮನಿಸಿಯೇ ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ-೧೫ ರಲ್ಲಿ ಕ್ರಿ.ಶ. ೧೩೮೧ ಎಂದು ದಾಖಲಿಸಲಾಗಿದೆ (ಪುಟ ೧೬. ಸಾರಾಂಶಗಳ ಭಾಗ).

೨. ಕ್ರಿ.ಶ. ೧೩೮೧ ದುರ್ಮತಿ ಸಂವತ್ಸರ ವೈಶಾಖ ಶುದ್ಧ ಪಾಡ್ಯ, ಶುಕ್ರವಾರ ಎಂದು ಗ್ರಹಿಸಿದರೆ ಜೂಲಿಯನ್ ಪಂಚಾಂಗದಂತೆ ಕ್ರಿ.ಶ. ೨೬-೪-೧೩೮೧, ಶುಕ್ರವಾರ, ರೋಹಿಣೀ ನಕ್ಷತ್ರಕ್ಕೆ ಸರಿಯೊಂದುತ್ತದೆ. ಗ್ರೆಗೋರಿಯನ್ ಪಂಚಾಂಗದಂತೆ ೪-೫-೧೩೮೧, ಗುರುವಾರ ರೋಹಿಣೀ ನಕ್ಷತ್ರಕ್ಕೆ ಸರಿಹೊಂದುತ್ತದೆ. ಆದರೆ ಶಾಸನದಲ್ಲಿ ಸ್ಪಷ್ಟವಾಗಿ ಕಟಪಯಾದಿ ಮತ್ತು ಅಂಕೆಗಳಲ್ಲಿ ಕಾಲವನ್ನು ಸೂಚಿಸಿರುವುದರಿಂದ ಕ್ರಿ.ಶ. ೧೩೮೧ ಗ್ರಹಿಸುವುದು ಕಷ್ಟಸಾಧ್ಯ. ಶಾಸನೋಕ್ತ ಕಾಲವನ್ನು ಶಕ ೧೩೩೨ ವೈಶಾಖ ಶುದ್ಧ ಪಾಡ್ಯ, ಶುಕ್ರವಾರ ಎಂದು ಮಾತ್ರ ಗ್ರಹಿಸಿದರೆ ಜೂಲಿಯನ್ ಪಂಚಾಂಗದಂತೆ ಕ್ರಿ.ಶ. ೫-೪-

೧೪೧೦, ಶುಕ್ರವಾರಕ್ಕೆ ಸರಿಹೊಂದುತ್ತದೆ. ಆದರೆ ರಾಜನ ಆಳ್ವಿಕೆಯ ಕಾಲ ಹೊಂದಿಕೆಯಾಗುವುದಿಲ್ಲ. ಆದರೂ ಇದನ್ನು ಖಚಿತವೆಂದು ಗ್ರಹಿಸಲು ತೊಡಕಿದೆ.

೩. ಈ ಶಾಸನದಲ್ಲಿ ಬರುವ 'ಕಂಠೀರಾಯಿ ಹುಟ್ಟುವಳಿ ಗದ್ಯಾಣ' ಎಂಬುದು ಕ್ರಿಶ. ೧೩೮೧ ಅಥವಾ ೧೪೧೦ ರ ಸುಮಾರಿಗೆ ಇದ್ದಿರಲೇ ಇಲ್ಲ. ಈಗ ದೊರಕುತ್ತಿರುವ ಅಧಿಕೃತ ಮಾಹಿತಿಯ ಪ್ರಕಾರ ಕಂಠೀರವ ಎಂಬ ಹೆಸರಿನಲ್ಲಿ ನಾಣ್ಯಗಳನ್ನು ಮೊದಲು ಟಂಕಿಸಿದವರು ಮೈಸೂರು ಒಡೆಯರ್ ವಂಶದ ರಣಧೀರ ಕಂಠೀರವ ನರಸರಾಜ ಒಡೆಯರು. ಇವರ ಕಾಲ ಕ್ರಿ.ಶ. ೧೬೩೮–೧೬೫೯. ಈ ನಾಣ್ಯಗಳು ಕಂಠೀರಾಯಿ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದವು. ವಸ್ತುಸ್ಥಿತಿ ಈ ರೀತಿಯಿರುವಾಗ ಶಾಸನದ ಕಾಲವು ಕ್ರಿಶ. ಸು ೧೬೫೦ ರ ನಂತರವೇ ಇರಬೇಕು. (ಕಂಠೀರಾಯಿ ನಾಣ್ಯದ ಬಗೆಗೆ ಹೆಚ್ಚಿನ ಮಾಹಿತಿಗೆ ನೋಡಿ : Coins & Currency System in Karnataka-A. V. Narasimha Murthy, Directorate of Archaeology and Museums in karnataka, Mysore-1997, page 379-385 ; ಕರ್ನಾಟಕ ನಾಣ್ಯ ಪರಂಪರೆ–ಎ. ವಿ. ನರಸಿಂಹಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೩, ಪುಟ ೨೯೩–೩೦೦; History of Mysore, Volume-1 (AD. 1399-1799)-C. Hayavadana Rao, Bangalore-1943, Appendix-IV, page 541-543).

೪. ಕಂಠೀರಾಯಿ ವರಹದ ಹೆಸರಿನ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಸಮಯಕ್ಕೆ ಹೊಂದುವಂತೆ ಬರುವ ದುರ್ಮತಿ ಸಂವತ್ಸರವನ್ನು ಗ್ರಹಿಸಿದರೆ ಶಾಸನೋಕ್ತ ಕಾಲದ ವಿವರಗಳು ಸ್ಪಷ್ಟವಾಗಿ ಜೂಲಿಯನ್ ಪಂಚಾಂಗದಂತೆ ಕ್ರಿಶ. ೯–೪–೧೬೮೧, ಶುಕ್ರವಾರ, ಭರಣೀ ನಕ್ಷತ್ರಕ್ಕೆ (=ಶಾಲಿವಾಹನ ಶಕ ೧೬೦೩) ಸರಿಹೊಂದುತ್ತದೆ. ಆದ ಕಾರಣ ಈ ಶಾಸನವು ವಿಜಯನಗರ ಕಾಲದ್ದಂತೂ ಅಲ್ಲ ಎಂದು ಖಚಿತವಾಗಿ ಹೇಳಬಹುದಾಗಿದೆ. (ಇದು ಕ್ರಿಶ. ೧೬೮೧ ರ ಕಾಲದ್ದೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಕ್ರಿಶ. ೧೬೮೧ ರ ನಂತರದ ಕಾಲದ್ದಾಗಿರಲೂಬಹುದು).

೫. ಬಾ. ರಾ. ಗೋಪಾಲ್ ಅವರು ಕಂಠೀರಾಯಿ ಹೆಸರನ್ನು ಗಮನಿಸಿ ಮತ್ತು ಶಾಸನೋಕ್ತ ಕಾಲ ಸಮರ್ಪಕವಾಗಿ ಹೊಂದುತ್ತಿಲ್ಲವಾದ ಕಾರಣ ಇದೊಂದು ಕೂಟ ಶಾಸನವೆಂದು ಮೊದಲೇ ಹೇಳಿರುತ್ತಾರೆ ನೋಡಿ : Vijaynagara Inscriptions, Vol.,-2, (ED) B.R. Gopal, Directorate of Archaeology and Museums, Mysore-1986, page 185, No-842). ಜೊತೆಗೆ ಶಾಸನೋಕ್ತ

ಕಾಲ ಬೇರೆ ಯಾವ ಸಮಯಕ್ಕೆ ಹೊಂದುವ ಸಾಧ್ಯತೆ ಇದೆ ಎಂದು ಕೂಡ ವಿವೇಚಿಸಿದ್ದರೂ ಕಂಠೀರಾಯಿ ನಾಣ್ಯದ ಕಾಲದ ಆಧಾರದ ಮೇಲೆ ವಿವೇಚಿಸಿಲ್ಲ. ಆದರೆ ಕಂಠೀರಾಯಿ ವರಹದ ಉಲ್ಲೇಖದಿಂದ ಕೂಟ ಶಾಸನ ಎಂದು ಹೇಳಿ ಕಂಠೀರಾಯಿ ವರಹ ಬಳಕೆಗೆ ಬಂದ ಕಾಲದ ವಿವರಗಳನ್ನು ಏಕೆ ಗಮನಿಸಿ ನೀಡಿಲ್ಲವೋ ತಿಳಿಯದು. ಈ ಶಾಸನದಲ್ಲಿ ಕಟಪಯಾದಿ ಸಂಖ್ಯಾವಾಚಕ ಮತ್ತು ಅಂಕೆಗಳೆರಡರಲ್ಲೂ ಕಾಲವನ್ನು ಹೇಳಲಾಗಿದೆ ಎಂಬ ಅಂಶವನ್ನೂ ದಾಖಲಿಸಿಲ್ಲ. ನಾಗರೀ ಲಿಪಿಯ ಶಾಸನವಿರಬಹುದೆಂದು ಸೂಚಿಸಿ ಪ್ರಶ್ನಚಿಹ್ನೆ ಹಾಕಿದ್ದಾರೆ. ಇದಕ್ಕೂ ಯಾವುದೇ ಆಧಾರಗಳನ್ನು ಸೂಚಿಸಿಲ್ಲ. ಈ ಕಾರಣದಿಂದ ಗೋಪಾಲ್ ಅವರು ನೀಡಿರುವ ವಿವರಗಳು ಅಸ್ಪಷ್ಟತೆಯಿಂದ ಕೂಡಿವೆ ಎಂದು ಹೇಳಬೇಕಾಗಿದೆ.

ಈ ಶಾಸನದಲ್ಲಿ ಹೊಯ್ಸಳ ದೇಶದ ಕೊಂಗುನಾಡಿಗೆ ಸೇರಿದ (ಕೊಂಗುನಾಡು ವೆಂಠೆಯದ) ಗುಬ್ಬಿ ಎಂಬ ಗ್ರಾಮವನ್ನು ಇಮ್ಮಡಿ ಹರಿಹರನು ತನ್ನ ತಂದೆಯಾದ ಬುಕ್ಕರಾಜನ ಹೆಸರಿನಲ್ಲಿ ಬುಕ್ಕರಾಜೇಶ್ವರಪುರವೆಂಬ ಪ್ರತಿನಾಮದಿಂದ ಕರೆದು ನಲವತ್ತು ವೃತ್ತಿಗಳಾಗಿ ಮಾಡಿ ವಿರೂಪಾಕ್ಷನ ಸನ್ನಿಧಿಯಲ್ಲಿ (=ಹಂಪೆಯ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ) ನಾನಾ ಗೋತ್ರದ, ನಾನಾ ಶಾಖೆಯ, ನಾನಾ ಹೆಸರಿನ ೩೯ ಜನ ಬ್ರಾಹ್ಮಣರಿಗೆ ದಾನಮಾಡಿರುತ್ತಾನೆ. ಈ ಬ್ರಾಹ್ಮಣರ ಗೋತ್ರಗಳು ಮತ್ತು ಹೆಸರುಗಳನ್ನು ಕೂಡ ಪೂರ್ಣವಾಗಿ ದಾಖಲಿಸಲಾಗಿದೆ. ಇದು ಆ ಕಾಲದ ಬ್ರಾಹ್ಮಣರ ಗೋತ್ರಗಳು, ಮನೆತನಗಳ ಹೆಸರುಗಳು, ಅವರು ವಲಸೆ ಬಂದ ಕಾಲದ ವಿವರಗಳು ಮುಂತಾದ ಮಾಹಿತಿಗಳ ಅಧ್ಯಯನಕ್ಕೆ ಉತ್ತಮ ಆಕರವಾಗಿದೆ. ನಂತರ ಚತುಸ್ಸೀಮೆಗಳ ಗಡಿಗಳನ್ನು ಅತ್ಯಂತ ವಿಸ್ತಾರವಾಗಿ ಹೇಳಿದೆ. ಗಡಿಗಳನ್ನು ಹೇಳಿರುವ ಭಾಗ ಭೌಗೋಳಿಕ ದೃಷ್ಟಿಯಿಂದ ಅಧ್ಯಯನಕ್ಕೆ ತಕ್ಕುದಾಗಿದೆ. ಆದರೆ ಕಾಲದ ಹಿನ್ನೆಲೆಯಲ್ಲಿ ಈ ಶಾಸನವನ್ನು ಅಧ್ಯಯನ ಮಾಡಬೇಕು. ಈ ಶಾಸನವು ದಾನ ಪಡೆಯಲು ಸೃಷ್ಟಿಸಲಾದ ದಾಖಲೆಯೆಂದು ಹೇಳಲು ಬಲವಾದ ಆಧಾರ ಕಂಠೀರಾಯಿ ಎಂಬ ಹೆಸರಿನ ಬಳಕೆಯೇ ಆಗಿದೆ. ವಿಜಯನಗರ ಕಾಲದ ಶಾಸನವೆಂದು ಎಷ್ಟೇ ಎಚ್ಚರಿಕೆಯಿಂದ ನಕಲನ್ನು ಸೃಷ್ಟಿಸಿದರೂ ತನ್ನ ಕಾಲದ ವಿವರಗಳು ಯಾವ ರೀತಿ ನುಸುಳಿರುತ್ತವೆ ಎಂಬುದಕ್ಕೆ ಇದು ಉತ್ತಮ ಉದಾಹರಣೆಯಾಗಿದೆ. ಇದೇ ರೀತಿಯಾಗಿ ಶಾಸನಪಾಠಗಳನ್ನು ಆಳವಾಗಿ ಗಮನಿಸಿದರೆ ಪ್ರಕೃತ ಶಾಸನದಂತಹ ಅನೇಕ ಶಾಸನಗಳು ದೊರಕಬಹುದು. ಜೊತೆಗೆ ಕೂಟ ಶಾಸನಗಳೆಂದು ಹೇಳುವ ಮೊದಲು ಅವುಗಳಿಗಿರುವ ಮಾನದಂಡಗಳನ್ನು, ಅದಕ್ಕೆ ಸಮರ್ಪಕವೆನ್ನಿಸುವಂತಹ ಕಾರಣಗಳನ್ನು ಸ್ಪಷ್ಟವಾಗಿ ಸೂಚಿಸಬೇಕು. ಇದರಿಂದ ಎಷ್ಟೋ ನೈಜ ಶಾಸನಗಳಿಗೆ ಅನ್ಯಾಯವಾಗುವುದು ತಪ್ಪುತ್ತದೆ. ಕೂಟ ಶಾಸನಗಳಲ್ಲಿಯೂ

ಇತಿಹಾಸಕ್ಕೆ ಸಂಬಂಧೀಸಿದ ವಿವರಗಳು ಇರುತ್ತವೆ. ಬೇರೆ ಆಧಾರಗಳಿಂದ ಅವುಗಳ ದಾಖಲಾತಿಗೆ ಬೆಂಬಲ ಇದ್ದರೆ ಆಯಾ ಸಂಗತಿಗಳನ್ನು ಸ್ವೀಕರಿಸಬಹುದು. ಜೊತೆಗೆ ಈ ಶಾಸನವು ಮೂಲತಃ ವಿಜಯನಗರ ಕಾಲದ್ದೇ ಆಗಿದ್ದು ನಕಲು ಮಾಡುವಾಗ ಕಂಠೀರಾಯಿ ವರಹದ ಉಲ್ಲೇಖವನ್ನು ಸೇರ್ಪಡೆ ಮಾಡಿದ್ದರೆ ಯಾವ ರೀತಿ ವಿಶ್ಲೇಷಣೆಗೆ ಅವಕಾಶವಿದೆ ಎಂಬ ಅಂಶ ವಿಚಾರಾರ್ಹ. ಒಟ್ಟಾರೆಯಾದ ಮಥಿತಾರ್ಥವೆಂದರೆ ಪ್ರಕೃತ ಶಾಸನ ಸ್ಪಷ್ಟವಾಗಿ ಕೂಟಶಾಸನ ಎಂದೇ ಹೇಳಬಹುದು. ಪ್ರಕೃತ ಬರಹದಲ್ಲಿ ನಮ್ಮ ಗಮನಕ್ಕೆ ಬಂದಂತೆ ಶಾಸನದ ನೈಜತೆಯ ಬಗೆಗೆ ವಿವೇಚಿಸಲಾಗಿದೆ. ಕೂಟ ಶಾನಗಳನ್ನು ಗುರುತಿಸಲು ನಾಣ್ಯಗಳು ಕೂಡ ಎಷ್ಟರಮಟ್ಟಿಗೆ ನೆರವು ನೀಡುತ್ತವೆ ಎಂಬ ಅಂಶ ಪ್ರಕೃತ ಲೇಖನದಿಂದ ವಿದಿತವಾಗುತ್ತದೆ. ಬೇರೆ ಬೇರೆ ಆಯಾಮಗಳಲ್ಲಿ ಕೂಡ ವಿಶ್ಲೇಷಿಸಲು ಸಾಧ್ಯವಿರುವ ಸಂಗತಿಯನ್ನು ಸಂಶೋಧಕರು ನಿರ್ಧರಿಸಿ ಹೇಳಬಹದು.



ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೪. ಜನಪದ ಮಹಾಕಾವ್ಯಗಳು ಮತ್ತು ಶೈವ ಪರಂಪರೆ– ಒಂದು ವಿವೇಚನೆ

–ಎಂ. ರೇಖಾ*

ಸಾಹಿತ್ಯ ಮತ್ತು ಧರ್ಮ ಒಂದಕ್ಕೊಂದು ಪೂರಕವಾದದ್ದು; ಒಂದೇ ನಾಣ್ಯದ ಎರಡು ಮುಖಗಳು ಎಂದರೂ ಅತಿಶಯೋಕ್ತಿಯಾಗಲಾರದು. ಶಿಷ್ಟಸಾಹಿತ್ಯದ ಪ್ರಾಚೀನ ಕೃತಿಗಳನ್ನು ಗಮನಿಸಿದಾಗ ಶೈವ, ಜೈನ, ಬೌದ್ಧ ಮೊದಲಾದ ಧರ್ಮಗಳು ಸಾಹಿತ್ಯವನ್ನೇ ತಮ್ಮ ಧರ್ಮಪ್ರಚಾರದ ಸಾಧನವನ್ನಾಗಿ ಬಳಸಿಕೊಂಡಿರುವುದು ಮನದಟ್ಟಾಗುತ್ತದೆ. ಅಂತೆಯೇ ಜನಪದ ಮಹಾಕಾವ್ಯಗಳಲ್ಲಿಯೂ ಈ ಪರಂಪರೆಯನ್ನು ಗಮನಿಸಬಹುದು.

ಜನಪದ ಮಹಾಕಾವ್ಯಗಳು ಒಂದು ಸಮುದಾಯದ ಅಥವಾ ಒಂದು ವರ್ಗದ ಜೀವನ, ಸಂಸ್ಕೃತಿ, ಇತಿಹಾಸಗಳ ಪ್ರತೀಕ. ಸಾಮಾನ್ಯವಾಗಿ ಚಾರಿತ್ರಿಕ ಹಾಗೂ ಪೌರಾಣಿಕ ನೆಲೆಗಟ್ಟಿನಲ್ಲಿ ಸಂಸ್ಕೃತಿಯ ಮೂಲಸೆಲೆಯಾಗಿ ಈ ಮಹಾಕಾವ್ಯಗಳು ರಚನೆಯಾಗಿರುತ್ತವೆ. ಒಂದು ಜನಾಂಗದ ಆಚಾರ–ವಿಚಾರ, ಧಾರ್ಮಿಕ ನಂಬಿಕೆ–ಶ್ರದ್ಧೆ, ಧರ್ಮ–ದೈವದ ಮೇಲೂ ಅವು ಬೆಳಕು ಚೆಲ್ಲುತ್ತವೆ. ಈ ಹಿನ್ನೆಲೆಯಲ್ಲಿ ಶೈವಧರ್ಮದ ಅರ್ಥಾತ್ ಶೈವ ಪರಂಪರೆಯು ಮುಂದುವರೆದ ರೂಪಗಳಾಗಿ ಕಾಣಿಸಿಕೊಳ್ಳುವ ಜನಪದ ಮಹಾಕಾವ್ಯಗಳಾದ ಮಂಟೇಸ್ವಾಮಿ, ಮಲೆ ಮಾದೇಶ್ವರ ಹಾಗೂ ಮೈಲಾರ ಲಿಂಗನ ಕಾವ್ಯಗಳನ್ನು ಇಲ್ಲಿ ವಿವೇಚನೆಗೆ ತೆಗೆದುಕೊಳ್ಳಬಹುದಾಗಿದೆ.

೧೨ನೇ ಶತಮಾನದಲ್ಲಿ ಕಾಣಿಸಿಕೊಂಡ ಧಾರ್ಮಿಕ ಚಳುವಳಿ ರಾಜಕೀಯ, ಸಾಮಾಜಿಕ, ಆರ್ಥಿಕ ಮೊದಲಾದ ಕ್ಷೇತ್ರಗಳ ಜೊತೆಗೆ ಸಾಹಿತ್ಯ ಕ್ಷೇತ್ರವನ್ನೂ ಪ್ರವೇಶಿಸಿತು. ಕ್ರಾಂತಿಯ ಕಾವು ಸಾಹಿತ್ಯದ ಮೂಲಕವೇ ಹೆಚ್ಚು ಪ್ರಜ್ವಲಿಸಿತು. ಕಾರಣ ಸಾಹಿತ್ಯ

* ಕನ್ನಡ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಚೇಳೂರು–೫೬೩೧೨೪, ಬಾಗೇಪಲ್ಲಿ ತಾ॥ ಚಿಕ್ಕಬಳ್ಳಾಪುರ ಜಿಲ್ಲೆ. ಮೊಬೈಲ್ : ೯೩೪೧೧೩೧೨೯೭೮.

ಕಾಲದ ಕೂಸು. ಬಸವಣ್ಣನವರ ಮೂಲಕ ಅಸ್ತಿತ್ವಕ್ಕೆ ಬಂದ ಶೈವಧರ್ಮ ಸಾಮಾನ್ಯರ ಧರ್ಮವಾಯಿತು. ಹೆಚ್ಚು ಕಡಿಮೆ ಎಲ್ಲಾ ಕೆಳವರ್ಗಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಅದು ಜನಪ್ರಿಯವಾಗತೊಡಗತು. ಬ್ರಾಹ್ಮಣಶಾಹಿಯ ವಿರುದ್ಧ, ಸಂಪ್ರದಾಯಗಳ ವಿರುದ್ಧ ಧಿಕ್ಕರಿಸಿ ನಿಂತಿತು. ಇದನ್ನು 'ಸಾಂಸ್ಕೃತಿಕವಾಗಿ ಪಲ್ಲಟದ ಕಾಲ' ಎಂದೆ ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಮೇಲ್ವರ್ಗದ ದೇವರುಗಳನ್ನು ಕೆಳವರ್ಗದ ಜನ ತಮ್ಮವನ್ನಾಗಿ ಸ್ವೀಕರಿಸಿದರು. ಜೊತೆಗೆ ನಮ್ಮ ಜಾತಿ ಅಥವಾ ಜನಾಂಗ ವರ್ಗದ ರಕ್ಷಕನನ್ನಾಗಿ ಮಾಡಿಕೊಂಡರು. ಇನ್ನೂ ಮುಂದುವರೆದು ತಮ್ಮ ಕೆಳವರ್ಗದಲ್ಲಿಯೇ ಜನಿಸಿದಂತೆ ಗುರುತಿಸಿಕೊಳ್ಳುವ ಪರಿಪಾಠ ಬಂದಿತು. ಇದಕ್ಕೆ ಉತ್ತಮ ನಿದರ್ಶನವಾಗಿ ಜನಪದ ಮಹಾಕಾವ್ಯಗಳು ನಿಲ್ಲುತ್ತವೆ.

೧೨ನೇ ಶತಮಾನದ ಧಾರ್ಮಿಕ ಚಳುವಳಿ ಹುಟ್ಟುಹಾಕಿದ ಶೈವ ಧರ್ಮ ತದನಂತರದಲ್ಲಿಯೂ ಸುಮಾರು ಎರಡು-ಮೂರು ದಶಕಗಳ ಕಾಲ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿತು. ಜನಪದರು ತಾವು ಒಪ್ಪಿಕೊಂಡ ಮತ-ಧರ್ಮಗಳ ಬಗೆಗಿನ ಶ್ರದ್ಧೆ-ನಂಬಿಕೆಗಳನ್ನು, ಇಷ್ಟದೈವವನ್ನು ಮಹಾಕಾವ್ಯಗಳಲ್ಲಿ ಪವಾಡಗಳ ಮೂಲಕ ಮೆರೆಸಿದ್ದಾರೆ. ಆ ಮೂಲಕ ಮಂಟೇಸ್ವಾಮಿ, ಮಲೆಮಾದೇಶ್ವರ, ಮೈಲಾರಲಿಂಗನ ಕಾವ್ಯಗಳಲ್ಲಿ ಶೈವ ಧರ್ಮದ ಆಚಾರ-ವಿಚಾರ, ನಂಬಿಕೆ ಶ್ರದ್ಧೆಗಳ ಜೊತೆಗೆ ಶಿವನ ಪವಾಡಗಳ ಸರಮಾಲೆಯೇ ಬಿತ್ತರಗೊಂಡಿದೆ. ಶೈವಧರ್ಮದ ಅಸ್ತಿತ್ವ ಈ ಕಾವ್ಯಗಳಲ್ಲಿ ಗುರುತಿಸಬಹುದಾಗಿದೆ.

ಈ ಮೂರು ಕಾವ್ಯಗಳಲ್ಲಿ ಕಂಡುಬರುವ ಕೆಲವು ಸಾಮ್ಯತೆಗಳನ್ನು ಈ ಕೆಳಗಿನಂತೆ ಗುರುತಿಸಬಹುದು. ಅವೆಂದರೆ :

೧. ಈ ಮೂರು ಧಾರ್ಮಿಕ ಜನಪದ ಮಹಾಕಾವ್ಯಗಳು.

೨. ಶೈವ ಪರವಾದ ಕಾವ್ಯಗಳಾಗಿದ್ದು; ಮೂರರಲ್ಲಿಯೂ ಶಿವನೇ ಕಥಾನಾಯಕನಾಗಿದ್ದಾನೆ.

ಅದೇ ರೀತಿ ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರನ ಕಾವ್ಯಗಳಲ್ಲಿ ಕೆಲವೊಂದು ಸಾಮ್ಯತೆಗಳನ್ನು ಗುರುತಿಸಬಹುದು. ಅವೆಂದರೆ :

೧. 'ಮಂಟೇಸ್ವಾಮಿ' ಕಾವ್ಯದ ನೀಲಗಾರರು ಹಾಗೂ ಮಾದೇಶ್ವರ ಕಾವ್ಯವನ್ನು ಹಾಡುವ ಕಂಸಾಳೆಯವರು ಒಂದೇ ಭೌಗೋಳಿಕ ಪರಿಸರದಲ್ಲಿ ಕಂಡುಬರುತ್ತಾರೆ. ಈ ಎರಡೂ ಮಹಾಕಾವ್ಯಗಳು ಪರಸ್ಪರ ಘರ್ಷಣೆಗಳಿಲ್ಲದೆ ಒಂದಕ್ಕೊಂದು ಪ್ರತಿಸ್ಪರ್ಧಿಯಂತೆ ಬೆಳೆದುಬಂದಿವೆ.

೨. ನೀಲಗಾರರ ಮಂಟೇಸ್ವಾಮಿ ಕಾವ್ಯವನ್ನು ಕಂಸಾಳೆಯವರೂ, ಮಾದೇಶ್ವರ

ಕಾವ್ಯವನ್ನು ನೀಲಗಾರರೂ ಪರಸ್ಪರ ಬದಲಾಯಿಸಿ ಹಾಡುತ್ತಾರೆ. ಎರಡೂ ಕಾವ್ಯಗಳು ಪರಸ್ಪರ ಪೂರಕ ಮತ್ತು ಸಹಾಯಕವೆಂಬಂತೆ ಬೆಳೆದುಬಂದಿವೆ.

೩. ಎರಡೂ ಕಾವ್ಯಗಳ ಕಥಾನಾಯಕರೂ ಉತ್ತರದಲ್ಲಿ ವಚನಕಾರರ ಚಳುವಳಿಯಿಂದ ಪ್ರಭಾವಿತರಾಗಿ ಪವಾಡ ಮೆರೆಯುತ್ತ ದಕ್ಷಿಣ ಕರ್ನಾಟಕದ ಪ್ರಶಾಂತ ತಾಣದಲ್ಲಿ ನೆಲೆನಿಂತವರು.

ಒಟ್ಟಾರೆ ಈ ಮೂರು ಜನಪದ ಮಹಾಕವ್ಯಗಳು ಶೈವಧರ್ಮದ ಪ್ರತೀಕಗಳು. ಮಂಟೇಸ್ವಾಮಿ ಕಾವ್ಯದ ಪ್ರಭುದೇವರು, ಮಲೆಮಾದೇಶ್ವರ ಕಾವ್ಯದ ಮಾದೇಶ್ವರ, ಮೈಲಾರಲಿಂಗ ಕಾವ್ಯದ ಮೈಲಾರಲಿಂಗ ಶಿವನ ವಿಭಿನ್ನ ರೂಪಗಳಾಗಿವೆ.

ಮಂಟೇಸ್ವಾಮಿ ಕಾವ್ಯ ಶೈವಧರ್ಮದಿಂದ ಹೆಚ್ಚು ಪ್ರಭಾವಿತವಾದದ್ದು. ೧೨ನೇ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಕೆಳವರ್ಗದವರಿಗೆ ನಡೆದ ಲಿಂಗಾಧಾರಣೆ, ಶೈವಧರ್ಮ ಸ್ವೀಕರಣೆ ಅದು ಕೊನೆ ಕೊನೆಗೆ ಅರ್ಥಹೀನವಾಯಿತು. ಸೋಮಾರಿಗಳಿಗೆ ದುಡಿಮೆಯಿಲ್ಲದೆ ಹೊಟ್ಟೆ ತುಂಬುವ ಮಾರ್ಗ ದೊರೆತಂತಾಯಿತು. ನಿಜಭಕ್ತಿಗಿಂತ ಡಾಂಭಿಕ ಭಕ್ತಿಯೇ ಹೆಚ್ಚಾಯಿತು. ಇದನ್ನು ಮಂಟೇಸ್ವಾಮಿ ಕಾವ್ಯ ಎತ್ತಿಹಿಡಿಯುತ್ತದೆ.ಒಂದು ಕಡೆ ಶೈವಧರ್ಮವನ್ನು ಜನಪ್ರಿಯಗೊಳಿಸುತ್ತಲೇ ಮತ್ತೊಂದು ಕಡೆ ಅದು ಅವನತಿಯತ್ತ ಸಾಗುವುದನ್ನು ಸೂಚಿಸಿರುವುದು ಈ ಕಾವ್ಯದ ವಿಶೇಷತೆಯಾಗಿದೆ. ಪ್ರಭುದೇವರು ಬಸವಣ್ಣ-ನೀಲಾಂಬಿಕೆಯರ ಭಕ್ತಿ ಪರೀಕ್ಷೆಯ ಜೊತೆಗೆ ಡಾಂಭಿಕ ಭಕ್ತರನ್ನು ಹೊರಗೆಳೆಯುವುದು, ಆ ಮೂಲಕ ಶೈವಧರ್ಮವನ್ನು ಶುದ್ಧೀಕರಿಸಿ, ರಕ್ಷಿಸುವುದು ಇಲ್ಲಿನ ಪ್ರಮುಖ ಆಶಯವಾಗಿದೆ. ಆ ಕಾರ್ಯಕ್ಕೆ ಬರುವ ನಾಯಕ ಶಿವನೇ ಆಗಿದ್ದಾನೆ. ಆದರೆ ಆತ ಅಸ್ಪೃಶ್ಯ ವೇಷಧಾರಿ ಎಂಬುದು ಮತ್ತೊಂದು ವಿಶೇಷವಾಗಿದೆ. ಬಸವಣ್ಣನನ್ನು ಎಚ್ಚರಿಸಿ, ಮುಂದೆ ಶೈವಧರ್ಮದ ಉಳಿವಿಗಾಗಿ, ಪ್ರಚಾರಕ್ಕಾಗಿ ಶಿಷ್ಯರನ್ನು ಪಡೆಯುತ್ತ, ಪವಾಡಗಳನ್ನು ಮೆರೆಯುವುದು ಕಾವ್ಯಕಥಾನಕದ ಕೇಂದ್ರವಾಗಿದೆ. ಇಲ್ಲಿ ಕೆಲವೊಂದು ಅಂಶಗಳು ಗಮನಾರ್ಹವಾದದ್ದು. ಅವೆಂದರೆ,

೧. ಮಂಟೇಸ್ವಾಮಿಗಳು ಅಸ್ಪೃಶ್ಯರಂತೆ ಚಿತ್ರಿತರಾಗಿರುವುದು.

೨. ಬಸವಣ್ಣ ನೀಲಾಂಬಿಕೆಯರ ಭಕ್ತಿಯ ದೃಢತೆಯನ್ನು, ಗುರುಭಕ್ತಿಯನ್ನು ಉನ್ನತವಾಗಿ ಚಿತ್ರಿಸಿರುವುದು.

೩. ಬೃಹತ್ ಸಂಖ್ಯೆಯಲ್ಲಿ ಜಂಗಮರಿದ್ದರೂ ಬಸವಣ್ಣ ದಂಪತಿಗಳ ಜಂಗಮನಿಷ್ಠೆಯನ್ನು ಅರಿಯಬಲ್ಲ ಒಂದು ಸಂಖ್ಯೆಯೂ ಉಳಿಯುವುದಿಲ್ಲ. ಇದ ಬಸವಣ್ಣನವರ ಬೋಧನೆಗಳು ಕಲ್ಯಾಣದಲ್ಲಿಯೇ ಅವನತಿಯ ಹಾದಿ ಹಿಡಿದವು ಎಂಬುದಕ್ಕೆ ಸಾಕ್ಷಿಪ್ರಜ್ಞೆಯಾಗಿದೆ.

೪. ಲಿಂಗ ಕಳೆದುಕೊಂಡು ಪರಿತಪಿಸುವ ಜಂಗಮ ವೇಷಧಾರಿಗಳು ಕೇವಲ ಸ್ಥಾವರ ಲಿಂಗಕ್ಕೆ ಮುಗಿಬಿದ್ದು ತಾವೆಷ್ಟು ಡಾಂಭಿಕರು ಎಂದು ತೋರಿಸಿಕೊಳ್ಳುತ್ತಾರೆ.

ಇಷ್ಟೆಲ್ಲಾ ಘಟನೆಗಳನ್ನು ಅತ್ಯಂತ ಪ್ರಜ್ಞಾಪೂರ್ವಕವಾಗಿ ಕಟ್ಟಿಕೊಡುವ ಜನಪದ ಕವಿಯ ಆಲೋಚನಾಕ್ರಮ ವಿಶಿಷ್ಟವಾಗಿದೆ. 'ಕಲ್ಯಾಣ ಪಟ್ಟಣ ಹಾಳಾಗಿ ಹೋಗುತ್ತದೆ' ಎಂಬ ಮಂಟೇಸ್ವಾಮಿಯವರ ಮಾತು ಕಲ್ಯಾಣಕ್ರಾಂತಿಗೆ ಮುಂಚೆ ಜಾತಿದ್ವೇಷದಿಂದ ಕುದಿಯುತ್ತಿರುವ ಕಲ್ಯಾಣದ ಸ್ಥಿತಿಗತಿಯ ಬಗೆಗೆ ಬೆಳಕು ಚೆಲ್ಲುವಂತಿದೆ. ಮಂಟೇಸ್ವಾಮಿಯವರನ್ನು ಬಸವಣ್ಣ ದಂಪತಿಗಳು ಆಹ್ವಾನಿಸಿದಾಗ 'ನಾವು ಬರುವುದಿಲ್ಲ' ಎಂಬ ಅವರ ಮಾತಿನ ಹಿಂದಿನ ಅರ್ಥವೇ ಕಲ್ಯಾಣದ ಭಯಾನಕ ಸ್ಥಿತಿಯನ್ನು ಧ್ವನಿಸುತ್ತದೆ. ಒಟ್ಟಾರೆ ಈ ಕಾವ್ಯ ಶೈವ ಪರಂಪರೆಯ ನೆಲೆಯೂರಿಕೆಯ ಜೊತೆ ಜೊತೆಗೆ ಅದರ ವಿನಾಶದ ಅಂಚನ್ನು ಸೂಚಿಸಿದೆ.

ಇನ್ನು ಮಲೆಮಾದೇಶ್ವರ ಕಾವ್ಯವೂ ಶೈವಪರವಾದ ಕಾವ್ಯ ಮತ್ತು ಶೈವಪರಂಪರೆಯ ಮುಂದುವರೆದ ರೂಪವಾಗಿದೆ. ಶಿವನ ರೂಪವಾದ ಮಾದೇಶ್ವರ ಆರಾಧ್ಯದೈವವಾಗಿ, ರಕ್ಷಕನಾಗಿ, ದುಷ್ಟ ಸಂಹಾರ ಮಾಡಿ ಪವಾಡಗಳನ್ನು ಮೆರೆದವನು. ಮಂಟೇಸ್ವಾಮಿಯಂತೆ ಅಸ್ಪೃಶ್ಯನಾದರೂ ದೈವತ್ವಕ್ಕೆ ಏರಲ್ಪಟ್ಟವನು. ಈ ಕಾವ್ಯದ 'ಆದಿಸಕ್ತಿ ಮಾದಪ್ಪನ ಸಾಲು' ಇಡೀ ಕತೆಯ ಚೌಕಟ್ಟನ್ನು ಸೂಚಿಸುತ್ತದೆ. ಇಲ್ಲಿ ಗಮನಸೆಳೆಯುವ ಮುಖ್ಯ ಅಂಶವೆಂದರ ಶಿವ ಮಾದಪ್ಪನಾಗಿ ಜನ್ಮತಾಳಲು ಇರುವ ಕಾರಣ ಶ್ರವಣ ದೊರೆ ಎಲ್ಲಾ ದೇವತೆಗಳನ್ನೂ, ನಿಸರ್ಗಶಕ್ತಿಯನ್ನೂ ತನ್ನ ವಶವಾಗಿಸಿಕೊಂಡು ಮೆರೆಯುತ್ತಾ, ಹಿಂಸಕನಾಗಿ, ಜೀವವಿರೋಧಿಯಾಗಿ ಬೆಳೆಯುತ್ತಾನೆ. ಅವನನ್ನು ಸಂಹರಿಸಲು ಶಿವ ಮಾದಪ್ಪನಾಗಿ ಹುಟ್ಟುತ್ತಾನೆ. ಮಾದಪ್ಪ ಮಾದಿಗರ ಮನೆಯಲ್ಲೇ ಹುಟ್ಟಿದ್ದೇಕೆ ? ಎಂಬ ವಿವರಣೆಗೂ ಇಲ್ಲಿಯೇ ಒಂದು ಕತೆ ಇದೆ. ನಮ್ಮ ಹಿಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಶ್ರವಣದೊರೆ ಎಲ್ಲಾ ಸಂಪನ್ಮೂಲಗಳನ್ನು ಕಬಳಿಸುವ ಮೇಲ್ವರ್ಗದ ಪ್ರತಿನಿಧಿಯಂತೆ ಕಂಡರೆ ಆಶ್ಚರ್ಯವಿಲ್ಲ. ಇಂಥ ಜೀವಪರಿಸರ ವಿರೋಧಿಯಾದ ಶಕ್ತಿಯನ್ನು ಸೋಲಿಸಲು 'ಕೆಳ' ವರ್ಗದ ಛಲ, ಹೋರಾಟ, ಅಗತ್ಯ ಎಂಬುದನ್ನು ಮಾದಪ್ಪನ ಕತೆ ಹೇಳುವಂತಿದೆ. ಅದೇ ರೀತಿ 'ಶ್ರವಣ' ದೊರೆ ಎಂಬ ಮಾತು ಜೈನರನ್ನು ಸೂಚಿಸುವುದೆಂದುಕೊಂಡರೆ, ಶಿವನ ಅವತಾರವಾದ ಮಾದಪ್ಪ, ಬೇರೆ ಬೇರೆ ಜಾತಿಗಳಿಗೆ ಸೇರಿದ ಅವನ ಒಕ್ಕಲುಗಳು, ಕತೆಯ ತುಂಬೆಲ್ಲಾ ಬರುವ ವೀರಶೈವ ಮಠಗಳು ಇವನ್ನೆಲ್ಲಾ ಕನ್ನಡ ನಾಡಿನ ವಿವಿಧ ಧರ್ಮಜಾತಿಗಳ ಘರ್ಷಣೆಯ ಕತೆ ಎಂದೂ ನೋಡಲು ಸಾಧ್ಯವಿದೆ. ಇಂದಿಗೂ ಮಾದಪ್ಪನ ಪೂಜಾರಿಗಳು ತಮ್ಮನ್ನು ಬೇಡರ ಕಣ್ಣಪ್ಪನ ಒಕ್ಕಲುಗಳು ಎಂದುಕೊಳ್ಳುತ್ತಾರೆ. ಬೇಡರ ಕಣ್ಣಪ್ಪ ಮಾದಪ್ಪನ ಮೊದಲ ಸಿಸುಮಗ. ಜೊತೆಗೆ ಸೋಲಿಗರ ಸಂಕಮ್ಮನ ಕತೆ ಕೂಡ ಇದೆ. ಈ ಕಥಾಭಾಗಗಳ ಪಾತ್ರಗಳನ್ನೆಲ್ಲಾ ಬುಡಕಟ್ಟುಗಳ ಜನಪ್ರತಿನಿಧಿಗಳು

ಎಂದುಕೊಂಡರೆ ಅವರಿಗೆ ಸಮಾನಾಂತರವಾಗಿ ಬೇಸಾಯದ ಕಸುಬಿನಲ್ಲಿ ತೊಡಗಿದ. ಪಶುಪಾಲನೆಯಲ್ಲಿ ತೊಡಗಿದ ಪಾತ್ರಗಳೂ ಇವೆ. ಈ ಪಾತ್ರ ವೈವಿಧ್ಯವನ್ನು ಎರಡು ರೀತಿ ವಿವರಿಸಿಕೊಳ್ಳುವ ಸಾಧ್ಯತೆ ಇದೆ. ಅವೆಂದರೆ ಮಾದಪ್ಪನ ಕತೆಯನ್ನು ಕರ್ನಾಟಕದ ಒಂದು ಪ್ರದೇಶದ ಸಾಂಸ್ಕೃತಿಕ ಪಲ್ಲಟಗಳ ಕತೆಯೆಂದು ನೋಡುವ ಸಾಧ್ಯತೆ ಒಂದಾದರೆ ಬುಡಕಟ್ಟು-ಪಶುಪಾಲನೆ-ವ್ಯವಸಾಯ ಈ ಪಲ್ಲಟ ಮತ್ತು ಘರ್ಷಣೆಗಳ ಚರಿತ್ರೆಯೆಂದು ನೋಡುವ ಸಾಧ್ಯತೆ ಮತ್ತೊಂದು ಬಗೆಯಾಗಿದೆ.

ಈ ಕಾವ್ಯದಲ್ಲಿ ಪವಾಡ, ತಂತ್ರಗಳ ಮೂಲಕ ಶೈವಧರ್ಮವನ್ನು, ಶೈವಾರಾಧನೆಯನ್ನು ಎತ್ತಿಹಿಡಿಯಲಾಗಿದೆ. ಮಾದಪ್ಪನನ್ನು ಮಾಯಕಾರ ಮಾದೇವ ಎಂದೆಲ್ಲಾ ವರ್ಣಿಸಿರುವುದುಂಟು. ಅವನು ಹೂಡುವ ತಂತ್ರಗಳು ಪವಾಡದ ರೂಪ ಪಡೆಯುವುದೂ ಉಂಟು. ಮಾದಪ್ಪನ ತಂತ್ರಗಳಿರಲಿ, ಪವಾಡಗಳಿರಲಿ ತನ್ನ ತನವನ್ನು ಸ್ಥಾಪಿಸುವುದರ ಜೊತೆಗೆ ಜನವರ್ಗದ ಹಿತಾಸಕ್ತಿಗಳನ್ನು ದೈವಪರಂಪರೆಯನ್ನು ರಕ್ಷಿಸಿಕೊಳ್ಳುವ ಅನಿವಾರ್ಯವಾದ ತಂತ್ರಗಾರಿಕೆಯಾಗಿದೆ. ಜನಪದ ಮಹಾಕಾವ್ಯಗಳಲ್ಲಿ ಪವಾಡಗಳು ಬಹುಶಃ ಎರಡು ಕಾರಣಕ್ಕಾಗಿ ಬರುತ್ತವೆ. ಮೊದಲನೆಯದು ಅವು ಆ ಕತೆ ಸೃಷ್ಟಿಗೊಂಡ ಸಮಾಜದ ಜನವರ್ಗದ ಆಶಯಗಳನ್ನು ಸೂಚಿಸುತ್ತದೆ. ಎರಡನೆಯದು ಕತೆ ಒಂದು ಪ್ರತ್ಯೇಕ ಸೃಷ್ಟಿಯಾಗಿ, ಕಥಾನಕ ಮುಂದುವರೆಯಲು ರಾಚನಿಕ ಅಗತ್ಯವಾಗಿ ಬಂದಿರುತ್ತದೆ.

ಒಟ್ಟಾರೆ ಮಂಟೇಸ್ವಾಮಿ ಹಾಗೂ ಮಲೆ ಮಾದೇಶ್ವರ ಕಾವ್ಯಗಳ ಈ ಕಥೆ ಹುಟ್ಟಿಸಿದ ಜನ ಯಾವುದನ್ನು ಆದರ್ಶವೆಂದು ಭಾವಿಸಿದ್ದರೋ ಆ ಆದರ್ಶದ ರೂಪಕಗಳೆಂಬಂತೆ ಶಿವಪರವಾದ ಭಕ್ತಿ ಚಳುವಳಿ ಈ ಕಥೆಗೆ ಒಂದು ಆಕರವಾಗಿ, ಆದರ್ಶವಾಗಿ ಒದಗಿದೆ. ಆಧ್ಯಾತ್ಮಿಕವಾಗಿ ಮತ್ತು ಸಾಮಾಜಿಕವಾಗಿ ಬಸವಣ್ಣನ ಕಲ್ಯಾಣ 'ಸಮಾನತೆ'ಯ ಒಂದು ಆದರ್ಶವನ್ನು ಪ್ರಸರಿಸಿದ ಕೇಂದ್ರ. ಬಸವಣ್ಣನ ಮತ್ತು ಕಲ್ಯಾಣದ ಪ್ರಭಾವ ಕನ್ನಡ ಸಾಹಿತ್ಯದ ಮೇಲೆ ಎಷ್ಟರಮಟ್ಟಿಗೆ ಆಗಿದೆ ಎಂದು ಪರಿಶೀಲಿಸುವಾಗ ಮಾದಪ್ಪನ ಕತೆ ಮತ್ತು ಮಂಟೇಸ್ವಾಮಿಯ ಕತೆಗಳನ್ನು ಗಮನಿಸುವುದು ಅಗತ್ಯವಾಗಿದೆ. ಕಲ್ಯಾಣ ಮತ್ತು ಅಲ್ಲಿನ ಶರಣರ ಚಳುವಳಿಯಲ್ಲಿ ಇದ್ದ ಕೊರತೆಗಳನ್ನು ಎತ್ತಿ ತೋರಿಸಿ ಅವುಗಳ ಪೂರ್ಣತೆಯ ಸಾಧ್ಯತೆಯನ್ನು ತೋರಿರುವುದು ಮಾದಪ್ಪ ಮತ್ತು ಮಂಟೇಸ್ವಾಮಿ ಕತೆಗಳ ಹಿಂದಿರುವ ಉದ್ದೇಶಗಳಲ್ಲಿ ಒಂದು. ಅಲ್ಲಿನ ಜನ ಮಾದಪ್ಪ ಮತ್ತು ಮಂಟೇಸ್ವಾಮಿಯವರ ಹಿರಮೆಯನ್ನು ಗುರುತಿಸಲಾರದವರು ಅಥವಾ ಭಕ್ತಿ ಚಳುವಳಿ ಆಚರಣೆಯ ಧರ್ಮವಾಗಿ ಜಡವಾಗಿದ್ದಾಗ ನಿಜವಾದ 'ಭಕ್ತ ನಾಯಕ' ಅವರ ಜಡತ್ವಕ್ಕೆ ಚಿಕಿತ್ಸೆ ನೀಡುವುದು ಈ ಕಾವ್ಯಗಳಲ್ಲಿ ಕಂಡುಬರುತ್ತದೆ.

ಮೈಲಾರ ಲಿಂಗನ ಕಾವ್ಯವೂ ಶೈವಪರಂಪರೆಯ ನೆಲೆಯಲ್ಲಿ ವಿಶಿಷ್ಟತೆ

ಪಡೆದುಕೊಂಡಿದೆ. ಇಲ್ಲಿಯೂ ಶಿವ ಬೇರೆಯಲ್ಲ. ಮೈಲಾರಲಿಂಗ ಬೇರೆಯಲ್ಲ. ಗೊರವರ ಆರಾಧ್ಯದೈವವಾಗಿ ಮತ್ತು ಪವಾಡಪುರುಷನಾಗಿ ಮೈಲಾರಲಿಂಗ ಪ್ರಜ್ವಲಿಸುತ್ತಾನೆ. ತನ್ನ ಪವಾಡ ಕಾರ್ಯಗಳಿಂದ ದೈವತ್ವಕ್ಕೆ ಏರಿ ಲಿಂಗರೂಪದಲ್ಲಿ ನೆಲೆನಿಲ್ಲುವುದು ಇಲ್ಲಿನ ವಿಶೇಷತೆಯಾಗಿದೆ.

ಮಂಟೇಸ್ವಾಮಿ ಮತ್ತು ಮಾದೇಶ್ವರ ಕಾವ್ಯಗಳು ಕಲ್ಯಾಣಕ್ರಾಂತಿಗೆ ಹತ್ತಿರವಾಗಿವೆ. ಆದರೆ ಮೈಲಾರಲಿಂಗ ಕಾವ್ಯದ ವಸ್ತು ಪುರಾಣದ ವಸ್ತುವಿಗೆ ಸಂಬಂಧಿಸಿದ್ದು. ಬಹುಶಃ ಈ ಕಾವ್ಯ ಹನ್ನೆರಡನೇ ಶತಮಾನಕ್ಕೆ ಮೊದಲಿನದಿರಬಹುದು. ಇಲ್ಲಿ ಶಿವಲಿಂಗ ರೂಪದಿಂದ ಭೂಲೋಕಕ್ಕೆ ಅವತರಿಸಿದ್ದು, ಗಂಗಿ ಮಾಳವ್ವನ ಜೊತೆಗೆ ಅವನ ಲಗ್ನ, ಕುರುಬರ ಮಾಳವ್ವನ ಕತೆ, ಕೋಮಾಲಿಯ ಕತೆ, ಶೀಲವಂತಿಕೆಯ ಕತೆ ಮೊದಲಾದವು ಪ್ರಮುಖವಾದವು. ಇಲ್ಲೆಲ್ಲಾ ಶಿವನ ಪವಾಡಗಳು ವಿಜೃಂಭಿಸುತ್ತವೆ. ಒಟ್ಟಾರೆ ಇದು ಸಹ ಶೈವಪರವಾದ ಕಾವ್ಯವಾಗಿದ್ದು, ಶಿವನ ಸಾಹಸ ಮತ್ತು ಅವತಾರದ ಕಥೆಗಳೊಂದಿಗೆ ಶೈವಾರಾಧನೆಯನ್ನು ಎತ್ತಿಹಿಡಿಯುತ್ತದೆ. ಗೊರವರ ಆರಾಧ್ಯದೈವವಾಗಿ, ಆ ಜನಾಂಗದ ರಕ್ಷಕನಾಗಿ, ಮೈಲಾರಲಿಂಗನಾಗಿ ಶಿವ ಇಲ್ಲಿ ಕಾಣಿಸಿಕೊಂಡಿದ್ದಾನೆ. ಮಲೆಮಾದೇಶ್ವರ ಕಾವ್ಯ ಮತ್ತು ಮಂಟೇಸ್ವಾಮಿ ಕಾವ್ಯಗಳಿಗಿಂತ ಮೈಲಾಲಿಂಗನ ಕಾವ್ಯ ಭಿನ್ನವಾದದ್ದು. ಪಟ್ಟಭದ್ರ ಸಂಸ್ಕೃತಿಗೆ ಪರ್ಯಾಯವಾದ ಕೆಳವರ್ಗ ಅಸ್ತಿತ್ವವನ್ನು ಪುನರ್‌ಸ್ಥಾಪಿಸುವ ಪ್ರತಿ ಸಂಸ್ಕೃತಿಯೊಂದರ ನಿರ್ಮಾಣ ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರ ಕಾವ್ಯಗಳಲ್ಲಿ ಎದ್ದುಕಾಣುತ್ತದೆ. ಕಾಡುಮೇಡು ಸುತ್ತುತ್ತಾ ಎಲ್ಲೆಂದರಲ್ಲಿ ಇದ್ದು ಸಾಮಾನ್ಯ ಜನರ ಮನಗೆದ್ದು ಸಾಮಾನ್ಯರ ವಿಸ್ಮಯಕ್ಕೆ ಕಾರಣರಾದವರು ಮಂಟೇಸ್ವಾಮಿ ಮತ್ತು ಮಾದೇಶ್ವರರು. ಮೈಲಾರಲಿಂಗ ಸಾಕ್ಷಾತ್ ತನ್ನ ಹೆಂಡತಿಯೊಡನೆ ಬೇರೊಂದು ಅವತಾರದಲ್ಲಿ ಕಾಣಿಸಿಕೊಂಡ ಪವಾಡಪುರುಷ. ಪುರಾಣದ ಕಥೆಗಿಂತ ಭಿನ್ನವಾಗಿ ಜನಪದ ಈ ಕಥಾನಕವನ್ನು ಚಿತ್ರಿಸಿರುವುದು ಗಮನಾರ್ಹವಾದದ್ದು. ಮೈಲಾರಲಿಂಗ ಕೇವಲ ಪೌರಾಣಿಕ ವ್ಯಕ್ತಿಯಾಗಿ ಮಾತ್ರವಲ್ಲದೆ, ಗೊರವರ ರಕ್ಷಕನಾಗಿ, ಅನೇಕ ಸಂದರ್ಭಗಳಲ್ಲಿ ಮಾನವೀಯ ಗುಣಗಳ ಪ್ರತಿನಿಧಿಯಂತೆಯೂ ವರ್ಣಿತನಾಗಿದ್ದಾನೆ.

ಈ ದೃಷ್ಟಿಯಿಂದ ಜನಪದ ಮಹಾಕಾವ್ಯಗಳಿಗೂ ಶೈವಪರಂಪರೆಗೂ ನಿಕಟ ಸಂಬಂಧವಿದೆ. 'ಸಾಹಿತ್ಯ ಮತ್ತು ಧರ್ಮ' ಎಂಬ ನೆಲೆಯಲ್ಲಿ ತೆಗೆದುಕೊಂಡು ಜನಪದ ಮಹಾಕಾವ್ಯಗಳನ್ನು ಅಭ್ಯಸಿಸಿದಾಗ ಇದು ದೃಢವಾಗುತ್ತದೆ. ಪ್ರತಿಯೊಂದು ಸಾಹಿತ್ಯ ಕೃತಿಯು ಒಂದಲ್ಲ ಒಂದು ಧರ್ಮದ ಹಿನ್ನೆಲೆ ಇಟ್ಟುಕೊಂಡಿರುತ್ತದೆ. ಇದಕ್ಕೆ ಜನವಾಣಿಯೂ ಹೊರತಾದದ್ದಲ್ಲ ಎನ್ನುವುದಕ್ಕೆ ಶೈವ ಪರಂಪರೆ ಮೌಖಿಕ ಮಹಾಕಾವ್ಯಗಳಲ್ಲಿ ನೆಲೆನಿಂತಿರುವುದು ಉತ್ತಮ ನಿದರ್ಶನವಾಗಿದೆ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# 5. ಬುಡಕಟ್ಟುಗಳ ಮಾತುಗಳಾಗಿ ಪಠ್ಯಪುಸ್ತಕಗಳ ತಯಾರಿ : ಒಂದು ಮಾತುಕತೆ

-ಬಸವರಾಜ ಕೋಡಗುಂಟಿ*

## ಹೂರಣ

ಜಾಗತೀಕರಣ ಅದರ ಹಿನ್ನೆಲೆಯಲ್ಲಿ ಮಾತುಗಳ ಸಾವು ಹೀಗೆ ಬೇರೆ ಬೇರೆ ವಿಶಯಗಳ ಬಗೆಗೆ ಇಂದಿನ ದಿನಗಳಲ್ಲಿ ಮಾತನಾಡುವುದು ಹೆಚ್ಚಾಗಿದೆ. ಇದಕ್ಕೆ ಕಾರಣವೂ ಇದೆ. ಅನೇಕ ಮಾತುಗಳು ವಿಶೇಶವಾಗಿ ಸಣ್ಣ ಮಟ್ಟ ಮಾತುಗಳು, ಬುಡಕಟ್ಟು ಮಾತುಗಳು ಬೇಗ ಇಲ್ಲವಾಗುತ್ತವೆ ಎಂಬ ಆತಂಕ ಮನೆ ಮಾಡಿದೆ. ಇವುಗಳಿಗೆ ಪರಿಹಾರ ಹುಡುಕುವ ನಿಟ್ಟಿನಲ್ಲಿ ಸಾಕಶ್ಟು ಪ್ರಯತ್ನಗಳೂ ನಡೆದಿವೆ. ಈ ನಿಟ್ಟಿನಲ್ಲಿ ಬುಡಕಟ್ಟುಗಳ ಮಾತುಗಳನ್ನು ಗಮನಿಸುವುದಾದರೆ ಆ ಮಾತುಗಳಾಗ ಪಟ್ಯಗಳನ್ನು ತಯಾರಿ ಮಾಡುವುದು ಮತ್ತು ಆ ಮಾತಿನ ಮಕ್ಕಳು ಅವರ ಮಾತಿನಲ್ಲಿಯೆ ಶಿಕ್ಶಣ ಪಡೆಯುವಂತೆ ಮಾಡುವುದು ಈ ಮೊದಲಾದವು ತುರ್ತಾಗಿ ಆಗಬೇಕಾದ ಕೆಲಸಗಳಾಗಿವೆ.

ಈ ಬರಿಕೆಯಲ್ಲಿ ಬುಡಕಟ್ಟು ಮಾತುಗಳಾಗ ಪಟ್ಯ ತಯಾರಿಸುವ ಮತ್ತು ಅವುಗಳನ್ನು ಸರಿಯಾಗಿ ಜಾರಿಗೆ ತರುವ ಬಗೆಗೆ ಅದೇ ರೀತಿ ಈ ನಿಟ್ಟಿನಲ್ಲಿ ಅಂದುಕೊಂಡ ಗುರಿಯನ್ನು ತಲುಪುವ ನಿಶ್ಟಾವಂತ ಪ್ರಯತ್ನಗಳ ಬಗೆಗೆ ಒಂದಶ್ಟು ಮಾತನಾಡಲಾಗಿದೆ.

ಪಟ್ಯಗಳಲ್ಲಿ ಬುಡಕಟ್ಟುಗಳ ಜಗತ್ತಿನಿಂದ ಏನನ್ನು ಕೊಡಬೇಕು, ಸ್ತಳೀಯ ಆಡಳಿತ ಮಾತು ಮತ್ತು ಸುತ್ತಲಿನ ಸಂಸ್ಕ್ರುತಿಯಿಂದ ಏನನ್ನು ಕೊಡಬೇಕು ಎಂಬುದರ ಬಗೆಗೆ ಇಲ್ಲಿ ಮಾತುಕತೆ ಇದೆ. ಪಟ್ಯಗಳ ತಯಾರಿ ಮತ್ತು ಅವುಗಳನ್ನು ಜಾರಿಗೆ ತರಬೇಕಾದ ಹಂತದಾಗ ಆಗಬೇಕಾದ ಕೆಲವು ಮಹತ್ವದ ಅಂಶಗಳನ್ನು ಇಲ್ಲಿ ಬೆರಳು ಮಾಡುವ ಪ್ರಯತ್ನ ಮಾಡಲಾಗಿದೆ. ಅದೆ ವೇಳೆಗೆ ಆ ಪಟ್ಯಗಳನ್ನು ಹೇಳಿಕೊಡುವ ಶಿಕ್ಶಕರನ್ನು ಬೆಳೆಸುವ ಮತ್ತು ಅವರೊಳಗೆ ಕೆಲಸದ ಬಗೆಗೆ ಆಸಕ್ತಿಯನ್ನು ಮೂಡಿಸಬೇಕಾದ

* ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಕರ್ನಾಟಕ ಕೇಂದ್ರೀಯ ವಿದ್ಯಾಲಯ ಗುಲಬರ್ಗಾ-೫೮೫ ೧೦೬. ಮೊಬೈಲ್ : ೯೧೯೯೧೬೦೫೩೦೫೭

ಬಗೆಗೂ ಕೆಲವು ಮಾತುಗಳಿವೆ.

ಒಟ್ಟಿನಲ್ಲಿ ಬುಡಕಟ್ಟುಗಳ ಮಾತುಗಳಾಗ ಪಟ್ಯ ತಯಾರಿಯ ಬಗೆಗೆ ಒಂದು ಹರಹುಳ್ಳ ಅವಲೋಕನ ಈ ಬರಿಕೆಯಾಗ ಇದೆ.

ಇಂದು ಜಗತ್ತಿನ ಪಿಪಿದ ಮುಕಗಳಲ್ಲಿ ಬುಡಕಟ್ಟುಗಳು ಅಡಕತ್ತರಿಗೆ ಸಿಲುಕುತ್ತಿದ್ದಾರೆ. ಬುಡಕಟ್ಟುಗಳ ಉಳಿವು ಒಂದು ಪ್ರಶ್ನೆಯಾಗಿ ಕಾಡುತ್ತಿದೆ. ಬಾರತ ದೇಶದ ವಯ್ವಿದ್ಯತೆಗೆ ಬುಡಕಟ್ಟುಗಳ ಕಾಣಿಕೆಯೆ ಪರಿಗಣಿಸುವಂತದ್ದು. ಬುಡಕಟ್ಟುಗಳು ಹೊಂದಿರುವ ಅರಿವು ಈ ಜಗತ್ತಿಗೆ ಇನ್ನೂ ಹೊಸದಾಗಿರುವ ಅನೇಕ ಅಂಶಗಳನ್ನು, ಅನೇಕ ಚಿಂತನೆಗಳನ್ನು, ಅನೇಕ ತಿಳುವಳಿಕೆಗಳನ್ನು ಒಳಗೊಂಡಿದೆ. ಬುಡಕಟ್ಟುಗಳ ಸಾವಿನಿಂದ ಈ ಎಲ್ಲವುಗಳು ಸತ್ತುಹೋಗುತ್ತವೆ. ಬುಡಕಟ್ಟು ವ್ಯಕ್ತಿಗಳು ಸಾಯದಿರಬಹುದು. ಆದರೆ ಅವರು ತಮ್ಮ ನೆಲವನ್ನು ಅದರೊಂದಿಗೆ ಅವರು ಹೊಂದಿರುವ ಕರುಳಬಳ್ಳಿಯನ್ನು ಕಿತ್ತೆಸೆದು ಬದುಕಿದರೆ ಅದು ಬುಡಕಟ್ಟುಗಳ ಸಾವು ಎಂದೆ ಅರ್ತ. ಆಗ ದೇಶ, ಜಗತ್ತು ಅಶ್ಟು ಮಟ್ಟಿಗೆ ವಯ್ವಿದ್ಯತೆಯನ್ನು ಕಳೆದುಕೊಳ್ಳುತ್ತದೆ. ಅಲ್ಲಿನ ಅರಿವನ್ನು ಕಳೆದುಕೊಳ್ಳುತ್ತದೆ. ಈ ಕಾರಣಕ್ಕಾಗಿ ಬುಡಕಟ್ಟುಗಳನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಸಮಾಜಕ್ಕಿದೆ.

ಇಂದು ಮಾತುಗಳು ಸಾಯುತ್ತಿವೆ ಎಂಬ ಅಂಶ ಎಲ್ಲರಿಗೂ ತಿಳಿದ ವಿಶಯ. ಇದು ಹೆಚ್ಚು ತೀವ್ರವಾಗಿದೆ ಎಂದು ಹೇಳಲಾಗುತ್ತದೆ. ಅದರಲ್ಲಿಯೂ ಎರಡು ತಿಂಗಳಿಗೆ ಒಂದರಂತೆ ಮಾತುಗಳು ಈ ಜಗತ್ತಿನಿಂದ ಕಣ್ಮರೆಯಾಗುತ್ತಿವೆ ಎಂದು ಮೊದಲಾಗಿ ಹೇಳುವುದನ್ನು ಕೇಳುತ್ತೇವೆ. ಆದರೆ ಬಾರತದ ಸಂದರ್ಬದಲ್ಲಿ ಇದನ್ನು ಅಶ್ಟು ಸುಲಬವಾಗಿ ಒಪ್ಪಿಕೊಳ್ಳುವುದು ಆಗದು. ಯಾಕೆಂದರೆ ಬಾರತದಾಗ ಯಾವತ್ತಿನಿಂದಲೂ ಯಾವ ಮಾತೂ ಕೊಲ್ಲುವ ಮಾತಾಗಿ ನಿಂತಿಲ್ಲ. ಬದಲಾಗಿ, ಒಂದಕ್ಕೊಂದು ಮಾತುಗಳು ಪೂರಕವಾಗಿ ಬದುಕಿ ಬಂದಿವೆ. ಹಾಗಾಗಿ ಯೂರೋಪಿನ ವಾತಾವರಣ ಬಾರತದಾಗ ಇಲ್ಲ ಎಂದೆನ್ನಬಹುದು.

ಆದರೆ ಇದರಿಂದ ಇಲ್ಲಿಯ ಮಾತುಗಳಿಗೆ ಅಪಾಯ ಇಲ್ಲ ಎಂದು ಹೇಳಲಾಗದು. ಮುಂದೊಂದು ಕಾಲಕ್ಕೆ ಅಪಾಯವೊದಗದೆ ಇರದು. ಈಗಾಗಲೆ ಅನೇಕ ಮಾತುಗಳಾಗ ಯುವಜನಾಂಗ ಆ ಮಾತುಗಳನ್ನಾಡುವುದು ಕಮ್ಮಿಯಾಗುತ್ತಿರುವುದನ್ನು ನೋಡಬಹುದು. ಇದನ್ನು ವಿಶೇಶವಾಗಿ ಬುಡಕಟ್ಟು ಮಾತುಗಳು ಮತ್ತು ಕಡಿಮೆ ಜನರಿರುವ ಮಾತುಗಳಾಗ ನೋಡಬಹುದು. ಈಗ್ಗೆ ಒಂದು ನೂರು ವರ್ಶಗಳ ಹಿಂದೆ ಇದ್ದ ಮಾತುಗಳ ನಡುವಿನ ಕೂಡಿಬಾಳುವ ಗುಣಗಳು ಕಡಿಮೆಯಾಗಿ ಬಾರತದಾಗೂ ಕೊಲ್ಲುವ ಮಾತುಗಳು ಬೆಳೆಯುತ್ತಿರುವ – ಬೆಳೆದಿರುವ ಹಾಗೆ ಕಾಣುತ್ತಿದೆ. ರಾಜ್ಯಗಳ ಮುಕ್ಯ ಮಾತುಗಳ ಕೆಳಗೆ ಆ ರಾಜ್ಯಗಳ ಬೇರೆ ಬೇರೆ ಸಣ್ಣ ಪುಟ್ಟ ಮಾತುಗಳನ್ನು ತಂದು ಅವುಗಳನ್ನು "ಹಿಂಡಿ ಹಿಪ್ಪೆ ಮಾಡುವ ವ್ಯವಸ್ತಿತ ಪ್ರಯತ್ನಗಳು ನಡೆದಿವೆ. ಈ ಎಲ್ಲ ಅಂಶಗಳು ಮಾತುಗಳಿಗೊದಗಿರುವ ಬಲುದೊಡ್ಡ ಅಪಾಯವನ್ನು ಗಂಟೆಬಾರಿಸಿ ಸಾರುತ್ತಿವೆ. ಆದ್ದರಿಂದ ಇದಕ್ಕೆ ಪೂರಕವಾಗಿ ಮಾತುಗಳನ್ನು ಉಳಿಸಿಕೊಳ್ಳಬೇಕಾದ ಅವಶ್ಯಕತೆಯನ್ನು ಈ ದೇಶಿಕರಿಗೆ ತಿಳಿಸಿಕೊಡಬೇಕು ಮತ್ತು ಅದಕ್ಕೆ ತಕ್ಕಂತೆ ಮಾತುಗಳನ್ನು

ಉಳಿಸಿಕೊಳ್ಳುವುದಕ್ಕೆ ಬೇಕಾದ ಅವಶ್ಯ ಕ್ರಮಗಳನ್ನು ತೆಗೆದುಕೊಳ್ಳಬೇಕು. ಜಾಗತೀಕರಣಕ್ಕೆ ಈ ನೆಲದ ಇಂತಾ ಬೆಳವಣಿಗೆಗಳು ಸೇರಿಕೊಂಡರೆ ಮಾತುಗಳು ಬೇಗ ಸತ್ತುಹೋಗುತ್ತವೆ ಎಂದು ಬೇರೆ ಹೇಳಬೇಕಾದ ಅವಶ್ಯಕತೆಯೆ ಇಲ್ಲ.

ಇಲ್ಲಿ ಸದ್ಯ ಗಮನ ಹರಿಸುತ್ತಿರುವುದು ಬುಡಕಟ್ಟು ಮಾತುಗಳನ್ನು ಮಾತ್ರ. ಅವುಗಳಿಗೊದಗಿರುವ ಅಪಾಯ ಯಾಕೆ ಬಂದಿದೆ, ಯಾವ ಹಂತದಾಗಿದೆ ಎಂಬುದರತ್ತ ಇಲ್ಲಿ ಗಮನ ಹರಿಸಿಲ್ಲ. ಬದಲಾಗಿ ಇವುಗಳನ್ನು ಉಳಿಸಿಕೊಳ್ಳುವ ಹಂತದಾಗ ಒಂದು ಪ್ರಮುಕ ಹೆಜ್ಜೆಯಾದ ಪಟ್ಯ ಪುಸ್ತಕಗಳ ತಯಾರಿಯ ಬಗೆಗೆ ಮಾತನಾಡಲಾಗಿದೆ. ಇದು ಆ ಮಾತಿನ ಹೊಸ ಜನಾಂಗವನ್ನ ಆ ಮಾತಿನೊಂದಿಗೆ ಬೆಸೆಯುವುದಕ್ಕೆ ಅವರೊಳಗೆ ತಮ್ಮ ಮಾತಿನ ಬಗೆಗೆ ಅಬಿಮಾನ ಪ್ರೀತಿ ಮೊದಲಾದವು ಬೆಳೆಯುವುದಕ್ಕೆ ಕಾರಣವಾಗುತ್ತದೆ. ಆದ್ದರಿಂದ ಅತ್ಯಂತ ಜರೂರಾಗಿ ಪಟ್ಯಗಳ ತಯಾರಿಯತ್ತ ಗಮನ ಹರಿಸಬೇಕಾಗಿದೆ.

ಪಟ್ಯಗಳ ತಯಾರಿಯ ಮೊದಲು ಆ ಮಾತುಗಳನ್ನು ಅದ್ಯಯನ ಮಾಡಬೇಕಾಗಿದೆ. ಈಗಾಗಲೆ ಅನೇಕ ಅದ್ಯಯನಗಳು ಹೆಚ್ಚು ಬುಡಕಟ್ಟು ಮಾತುಗಳ ಮೇಲೆ ಬಂದಿರುವುದು ನಿಜ. ಆದರೆ ಇನ್ನೂ ಅನೇಕ ಅದ್ಯಯನಗಳು ಬರಬೇಕಾಗಿವೆ. ಬುಡಕಟ್ಟು ಮಾತುಗಳ ಸೊಲ್ಲಗಟ್ಟು (ವ್ಯಾಕರಣ), ಪದಕಟ್ಟು ಮೊದಲಾದವುಗಳನ್ನು ತಯಾರಿಸಬೇಕು. ಇದರೊಂದಿಗೆ, ಆ ಆ ಮಾತಿನ ಜನಪದವನ್ನು ಕಟ್ಟಿಕೊಡುವ ವ್ಯವಸ್ತಿತ ಪ್ರಯತ್ನ ಮಾಡಬೇಕಿದೆ. ಈ ಹಂತದಾಗ ಆ ಆ ಮಾತುಗಳ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸಬೇಕು. ಅವುಗಳಲ್ಲಿನ ನುಡಿಗಟ್ಟುಗಳು, ಗಾದೆಗಳು, ಅವರುಗಳ ಗಣಿತ, ವಯಿದ್ಯಕೀಯ, ತಾಂತ್ರಿಕತೆ, ಬೇರೆ ಬೇರೆ ಬಗೆಯ ಕುಶಲತೆಗಳು ಇವುಗಳ ಬಗೆಗೆ ಸರಿಯಾದ ಅದ್ಯಯನವಾಗಿ ಅವುಗಳನ್ನು ಸರಿಯಾದ ರೀತಿಯಲ್ಲಿ ಸಂಗ್ರಹಿಸಿ ಕೊಡಬೇಕು. ಅದರೊಂದಿಗೆ ಅವುಗಳನ್ನು ಅದ್ಯಯನ ಮಾಡಿ ವಿವರಿಸಬೇಕು. ಅವುಗಳ ಮಹತ್ವವನ್ನು ಸಮಾಜಕ್ಕೆ, ಜಗತ್ತಿಗೆ ತೋರಿಸಿಕೊಡಬೇಕು. ಆ ಆ ಮಾತುಗಳ ಸಮುದಾಯಗಳಾಗ ಆಗಿ ಹೋದ ಸಾಂಸ್ಕೃತಿಕ ವೀರರನ್ನ, ನಾಯಕರನ್ನ ಗುರುತಿಸಿ ಅವುರುಗಳ ಇತಿಹಾಸವನ್ನ ದಾಕಲಿಸಬೇಕು. ಅದರೊಂದಿಗ ಆ ಮಾತಿನ ಯುವಕರಿಗೆ ಇವುಗಳನ್ನು ಕೊಟ್ಟು ಈ ಎಲ್ಲ ಅಂಶಗಳು ಯಾವತ್ತೂ ಅಚ್ಚಳಿಯದಂತೆ ಉಳಿಯುವಂತೆ ಮಾಡಬೇಕಿದೆ. ಹಾಗೆ ನೋಡಿದರೆ ಇದನ್ನು ಈ ನೆಲದ ಜನತೆ ಯಾವತ್ತಿನಿಂದಲೂ ಉಳಿಸಿಕೊಂಡು ಬಂದಿದ್ದಾರೆ. ಆದರೆ ಇಂದಿನ ಸಮಾಜದ ಒತ್ತಡ ಅವರನ್ನು ಇವುಗಳಿಂದ ದೂರಕ್ಕೆ ಕರೆದುಕೊಂಡು ಬರುತ್ತಿದೆ ಎಂಬ ಅಂಶವನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಆ ಮಾತುಗಳ, ಅವುಗಳನ್ನಾಡುವ ಮಂದಿಯ ಇತಿಹಾಸವನ್ನು ಕಟ್ಟಿಕೊಡಬೇಕು. ಈಗಾಗಲೆ ಈ ನಿಟ್ಟಿನಾಗ ಸಾಕಷ್ಟು ಪ್ರಯತ್ನಗಳು ಆಗಿವೆ ಎಂಬುದನ್ನೂ ಇಲ್ಲಿ ನೆನಪಿನಾಗಿಟ್ಟುಕೊಳ್ಳಬೇಕು. ಅಲ್ಲಲ್ಲಿ ಹರಡಿಕೊಂಡಿರುವ ಸಾದ್ಯತೆಗಳಿರುವ ಇಂತಾ ಕೆಲಸಗಳನ್ನು ಒಂದೆಡೆ ತಂದು ಹಾಕಿ ಆನಂತರ ಇನ್ನೂ ಉಳಿದಿರಬಹುದಾದ ಕೊರತೆಗಳನ್ನು ತುಂಬಿಕೊಳ್ಳಬಹುದು. ಇದೆಲ್ಲವೂ ಅನೇಕ ಹಂತಗಳಾಗ ಪ್ರಾಮುಕ್ಯತೆಯನ್ನು ಪಡೆದುಕೊಳ್ಳುತ್ತವೆ. ಆ ಆ ಮಾತುಗಳಲ್ಲಿ

ಅಧ್ಯಯನಗಳೂ ಆಗುತ್ತವೆ. ಅದೇ ವೇಳೆಗೆ ಆ ಮಾತುಗಳ ಮುಂದನ್ನು ಕಾಣುವ ಪ್ರಯತ್ನ ಮಾಡಬಹುದು. ಈ ಎಲ್ಲ ಅಧ್ಯಯನಗಳು ಪಠ್ಯ ತಯಾರಿಕೆಗೆ ಅನುಕೂಲವಾಗುವಂತಹವುಗಳು. ಅದೇ ವೇಳೆಗೆ ಬಹಳ ಮುಖ್ಯವಾಗಿರುವ ಅಂಶವೆಂದರೆ ಹೊಸತಾಗಿ ಅಕ್ಷರ ಕಲಿತವರಿಗೆ ಓದಲು ಸಾಮಗ್ರಿಯನ್ನು ಒದಗಿಸಿದಂತಾಗುತ್ತದೆ. ಹಾಗಾಗಿ ಪಠ್ಯಗಳ ತಯಾರಿಯ ಜೊತೆಜೊತೆಯಲ್ಲಿ ಈ ಎಲ್ಲ ಅಂಶಗಳತ್ತ ಗಮನವನ್ನು ಹರಿಸಬೇಕು.

ಇನ್ನು ಬುಡಕಟ್ಟು ಮಾತುಗಳಾಗ ಪಠ್ಯ ತಯಾರಿಸುವ ಹಂತದಾಗ ಗಮನಿಸಬೇಕಾದ ಮುಖ್ಯವಾದ ಅಂಶಗಳನ್ನು ಇಲ್ಲಿ ನೋಡಬಹುದು.

ಸಾಮಾನ್ಯವಾಗಿ ಮಕ್ಕಳಿಗೆ ಪ್ರಾತಮಿಕಮೊದಲು ಶಾಲೆಗಳಾಗ ಆಟೋಟಗಳನ್ನು ಹೇಳುವಾಗ ಪೂರ್ಣವಾಗಿ ಆ ಆ ಬುಡಕಟ್ಟುಗಳ ಸಮಾಜವನ್ನು ಪರಿಗಣಿಸಬೇಕು. ಅಲ್ಲಿ ಆ ಮಾತುಗಳ ಶಿಕ್ಶಕರನ್ನು ನೇಮಿಸಬೇಕು. ಅಲ್ಲಿನ ವಾತಾವರಣ ಪೂರ್ಣವಾಗಿ ಆ ಮಾತಿನದೆ ಆಗಿರಬೇಕು. ಆ ಮಕ್ಕಳಿಗೆ ಮನೆಯ ವಾತಾವರಣವನ್ನೆ ಮತ್ತೆ ಕಟ್ಟಿಕೊಡಬೇಕು. ಇದು ಮಕ್ಕಳ ಶಯಿಕ್ಶಣಿಕ ಜೀವನದ ಮೊದಲ ಹೆಜ್ಜೆಯಾಗುವುದರಿಂದ ಶಾಲೆಯ ವಾತಾವರಣವನ್ನು ಮೊದಲ ಬಾರಿಗೆ ಪರಿಚಯಿಸಿಕೊಡುವುದರಿಂದ ಇದು ಮಹತ್ವವನ್ನು ಪಡೆದುಕೊಳ್ಳುತ್ತದೆ. ಮಕ್ಕಳು ಶಾಲೆಯೊಂದಿಗೆ ತಮ್ಮದೆ ಮಾತುಗಳೊಂದಿಗೆ ಅಂಟಿಕೊಳ್ಳುತ್ತಾರೆ ಎನ್ನುವುದು ಮುಖ್ಯವಾದ ಅಂಶವಾಗಿದೆ. ಇದು ಮುಂದಿನ ಅವರ ಶಿಕ್ಶಣಕ್ಕೆ ಒಳ್ಳೆಯ ದಾರಿಯನ್ನು ಮಾಡಿಕೊಡುತ್ತದೆ.

ಇಲ್ಲಿ ಮಕ್ಕಳಿಗೆ ಹೇಳಿಕೊಡುವ ಆಟೋಟಗಳು ಆ ಸಮಾಜದವುಗಳೆ ಆಗಿರಬೇಕು. ಆ ಮಾತುಗಳ ಮತ್ತು ಅವುಗಳನ್ನಾಡುವ ಸಮುದಾಯಗಳ ಜನಪದ ಆಟಗಳು, ಜನಪದ ಮಕ್ಕಳ ಸಾಹಿತ್ಯ, ಒಗಟು, ಗಾದೆ, ಜನಪದ ಗಣಿತ ಆ ನೆಲದ ತಿಳುವಳಿಕೆ ಈ ಮೊದಲಾದ ಅಂಶಗಳ ಮೇಲೆ ಹೆಚ್ಚು ಗಮನವನ್ನು ಹರಿಸಬಹುದು.

ಶಿಕ್ಶಣದಲ್ಲಿ ಕೊಡುವ ಕೆಲವು ಮುಕ್ಯ ಅಂಶಗಳೆಂದರೆ, ಲಿಪಿ, ಮಾತು, ವಸ್ತು ಮೊದಲಾದವು. ಬುಡಕಟ್ಟುಗಳ ಮಾತುಗಳಿಗೆ ಪಠ್ಯಗಳನ್ನ ತಯಾರಿ ಮಾಡುವಾಗ ಈ ಎಲ್ಲವುಗಳನ್ನೂ ಆರಿಸಬೇಕು.

ಸಾಮಾನ್ಯವಾಗಿ ಲಿಪಿಯನ್ನು ಕೊಡುವಾಗ ಆ ಆ ನಾಡಿನ ಮಾತಿನ ಲಿಪಿಗಳನ್ನೆ ಬಳಸಿಕೊಳ್ಳಬಹುದು. ಸಾಮಾನ್ಯವಾಗಿ ಬುಡಕಟ್ಟು ಮಾತುಗಳಾಗ ಈಗ ಲಿಪಿ ಇಲ್ಲದಿರುವುದರಿಂದ ಅವುಗಳು ನೆಲೆಗೊಂಡಿರುವ ನಾಡಿನ ಮಾತಿನ ಲಿಪಿಯನ್ನು ಅಳವಡಿಸಿಕೊಳ್ಳುವುದು ಸಹಜವಾಗಬಹುದು. ಆದರೆ ಈ ನಿಟ್ಟಿನಾಗ ಅನೇಕ ಸಮಸ್ಯೆಗಳು ಬರುವುದು ನಿಜ. ಇಲ್ಲಿ ಕೆಲವು ಬಗೆಯ ಸಾಮಾನ್ಯ ಸಮಸ್ಯೆಗಳನ್ನು ನೋಡಬಹುದು.

1. ಒಂದು ಮಾತಿಗೆ ಈಗಾಗಲೆ ಒಂದು ಲಿಪಿಯನ್ನು ಬಳಸುತ್ತಿರಬಹುದು
2. ಒಂದು ಮಾತು ಒಂದಕ್ಕಿಂತ ಹೆಚ್ಚು ನಾಡುಗಳಾಗ ವ್ಯಾಪಿಸಿಕೊಂಡಿರಬಹುದು

3. ಬುಡಕಟ್ಟುಗಳ ಮಾತುಗಳು ಆ ನಾಡಿನ ಮಾತಿಗಿಂತ ಇನ್ನೊಂದು ಮಾತಿಗೆ ಹೆಚ್ಚು ಸಮೀಪದ ಸಂಬಂದವನ್ನು ಇಟ್ಟುಕೊಂಡಿರಬಹುದು, ಇಲ್ಲವೆ ಆ ಮಾತುಗಳ ಸಮುದಾಯ ಇಂತಾ ಸಂಬಂದವನ್ನು ಬಯಸಬಹುದು

4. ಒಂದು ನಾಡಿನಾಗ ಒಂದಕ್ಕಿಂತ ಹೆಚ್ಚು ಲಿಪಿಗಳು ಬಳಕೆಯಲ್ಲಿದ್ದಿರಬಹುದು

ಈ ಮೊದಲಾದ ಅನೇಕ ಸಮಸ್ಯೆಗಳು ಲಿಪಿಯ ಅಳವಡಿಕೆಯಾಗ ಬರಬಹುದು. ಕೆಲವು ಮಾತುಗಳಿಗೆ ಒಂದಕ್ಕಿಂತ ಹೆಚ್ಚು ಸಮಸ್ಯೆಗಳು ಒಟ್ಟಿಗೆ ಇದ್ದಿರಲೂಬಹುದು. ಇಂತಾ ಹೊತ್ತಿನಾಗ ಆ ಮಾತುಗಳ ಸಮುದಾಯಗಳನ್ನು ಮತ್ತು ಆ ನಾಡಿನ ಮಾತು ಮತ್ತು ಸಮಾಜ ಮತ್ತು ಅವುಗಳ ನಡುವೆ ಇರುವ ಸಂಬಂದಗಳನ್ನು ಗಮನದಲ್ಲಿಟ್ಟುಕೊಂಡು ಹಿರಿಯರು, ಅರಿಗರು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು. ಸಮಸ್ಯೆಗಳನ್ನು ದಾಟಲು ಸಾದ್ಯವಾಗದೆ ಹೋಗುವಂತಿದ್ದರೆ, ತಾತ್ಕಾಲಿಕವಾದ ಪರಿಹಾರಗಳನ್ನು ಕಂಡುಕೊಂಡು ಮುಂದುವರೆಯಬಹುದು. ಆ ಮಾತುಗರು ನೆಲೆಸಿರುವ ಜಾಗ, ಅಲ್ಲಿನ ಸಮಾಜ ಮತ್ತು ಅವುಗಳ ವಾತಾವರಣ ಮೊದಲಾದ ಅಂಶಗಳನ್ನು ಗಮನದಾಗಿಟ್ಟುಕೊಂಡು ಅವಶ್ಯವಾದರೆ ಎರಡು ಲಿಪಿಗಳ ಬಳಕೆಯನ್ನೂ ಮಾಡಬಹುದು. ಆದರೆ ಇದು ತಾತ್ಕಾಲಿಕವಾಗಿದ್ದರೆ ಒಳ್ಳೆಯದು. ಯಾವುದೆ ಆಯ್ಕೆಯನ್ನು ತೆಗೆದುಕೊಂಡರೂ ಅದು ಆ ಸಮುದಾಯಕ್ಕೆ ಒಪ್ಪಿತವಾದುದಾಗಿರಬೇಕು. ಅದೆ ವೇಳೆಗೆ ಆ ಮಾತಿಗೆ ಒಗ್ಗುವಂತದ್ದಾಗಿರಬೇಕು. ಆರಂಬದಲ್ಲಿಯೆ ಲಿಪಿಯ ಆಯ್ಕೆಯ ಹೊತ್ತಿನಾಗ ಮಾಡಿದ ತಪ್ಪಿನಿಂದಾಗಿ ಇಂದಿನ ಹೆಚ್ಚು ಭಾರತದ ಮಾತುಗಳು ಲಿಪಿ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ನೋಡಬಹುದು. ಆದ್ದರಿಂದ ಈ ತಿಳುವಳಿಕೆಯನ್ನ ಗಮನದಾಗಿಟ್ಟುಕೊಂಡು ಲಿಪಿಯನ್ನು ಆಯ್ಕೆ ಮಾಡಬೇಕು.

ಮುಕ್ಯವಾಗಿ ಮೊದಲ ತರಗತಿಯಾಗ ಅವರ ಮಾತಿನಾಗಲೆ ಇಡಿಯ ಪಟ್ಯವನ್ನು ಕೊಡಬಹುದು. ಇಲ್ಲಿ ಪರಿಚಯಿಸುವ ಬವ್ತಿಕ ವಸ್ತುಗಳನ್ನು ಆ ಮಾತಿನಾಗಲೆ ಪರಿಚಯಿಸಬೇಕು. ಅದು ಆ ಮಾತುಗಳಿಂದ ಎತ್ತಿಕೊಂಡ ವಸ್ತುಗಳೆ ಆಗಿರಬೇಕು ಎಂಬುದು ಬಲು ಮುಕ್ಯವಾದ ಅಂಶ. ಇದರಾಗ ಕೆಲವು ಅಂಶಗಳನ್ನು ಎತ್ತಿ ಹೇಳಬಹುದು. ಆ ಮಾತಿನಾಗ ಸಾಮಾನ್ಯವಾಗಿ ಬಳಸುವ ವಸ್ತುಗಳು, ಆ ಮಾತುಗಳ ಸಮುದಾಯಗಳು ದಿನಜೀವನದಾಗ ಬಳಸುವಂತವುಗಳು, ಅವರ ಕೆಲಸ, ಉದ್ಯೋಗಕ್ಕೆ ಸಂಬಂದಪಟ್ಟ ವಸ್ತುಗಳು, ಆ ಮಾತುಗಳ ಪರಿಕಲ್ಪನೆಗೆ ಸಿಗುವಂತವುಗಳು ಮೊದಲಾದವು. ಇಲ್ಲಿ ಆ ವಸ್ತುಗಳಿಗೆ ಆ ಮಾತಿನಾಗ ಮತ್ತು ಅವುಗಳನ್ನಾಡುವ ಸಮುದಾಯಗಳಾಗ ಇರುವ ಪ್ರಾಮುಕ್ಯತೆಯನ್ನು ಪರಿಚಯಿಸಿಕೊಡಬೇಕು. ಅವುಗಳ ಮಹತ್ವವನ್ನು ತಿಳಿಸಿಕೊಡಬೇಕು. ಅದೆ ವೇಳೆಗೆ ಆ ಸಮುದಾಯಕ್ಕೆ ಸಂಬಂದಿಸಿದ ಯಾವುದಾದರೂ ವಸ್ತು, ಆಚರಣೆ, ಸಂಪ್ರದಾಯ ಮೊದಲಾದವನ್ನು ಬೇರೆ ಸಮಾಜದವರು ಕೀಳಾಗಿ ಕಾಣುವಂತಿದ್ದರೆ ಅವುಗಳನ್ನು ಸರಿಯಾಗಿ ಪರಿಚಯಿಸಿಕೊಡಬೇಕು. ಮುಂದೆ ಅವುಗಳಿಂದಾಗಿ ಮಕ್ಕಳು ದೊಡ್ಡದಾದ ಸಮಾಜದಿಂದ ಅನುಬವಿಸಬಹುದಾದ

ಕೀಳರಿಮೆಯಿಂದ ಹೊರಬರಲು ಇದು ಅನುವಾಗುವಂತಿರಬೇಕು. ಆದರೆ ಇದರ ಮೂಲಕ ಆ ಮಕ್ಕಳು ಮತ್ತೆ ತಮ್ಮದೆ ಸಮುದಾಯದ ಕೆಲಸದಾಗ ಮಾತ್ರವೆ ಮುಂದುವರೆಯುವಂತೆ ಆಗಕೂಡದು. ಬದಲಾಗಿ ಅವುಗಳ ಬಗೆಗೆ ತಿಳುವಳಿಕೆಯನ್ನು ಅವರು ಇಟ್ಟುಕೊಂಡಿರಬೇಕು. ಏನಿಲ್ಲವೆಂದರೂ ಅವರ ಸಮಾಜದ ವಸ್ತುಗಳು ಮತ್ತು ಆ ಸಮುದಾಯಗಳ ಇತಿಹಾಸ ಎಂದಾದರೂ ಅವುಗಳ ಪರಿಚಯ ಅವರಿಗಾಗಬೇಕು. ಮುಂದೆ ಆ ಮಕ್ಕಳನ್ನು ಉಳಿದೆಲ್ಲರಂತೆ ಆಯ್ಕೆಯ ಅವಕಾಶಗಳತ್ತ ಎಳೆಯಬೇಕು.

ಆ ಸಮುದಾಯದ ಮಾತಿನ ಜನಪದ ಸಾಹಿತ್ಯವನ್ನು ಇಲ್ಲಿ ಬಳಸಿಕೊಳ್ಳಬಹುದು. ಮಕ್ಕಳಿಗೆ ಕೊಡಬಹುದಾದ ಸಾಹಿತ್ಯವನ್ನು ಕಲೆಹಾಕಿ ಅವರಿಗೆ ಅವರ ಮಾತು ಕಂಡ, ಕಾಣುವ ಜಗತ್ತನ್ನು ಪರಿಚಯಿಸುವತ್ತ ಗಮನ ಇರಬೇಕು. ಅದರಲ್ಲಿ ಇರಬಹುದಾದ ಕೆಲವು ಅಂಶಗಳೆಂದರೆ,

1. ಆ ಮಾತುಗಳ ಗಾದೆ, ಒಗಟು, ಕತೆ, ಪದ ಮೊದಲಾದ ಸಾಹಿತ್ಯ ಪ್ರಕಾರಗಳು

2. ಆ ಮಾತು ಕಾಣುವ ದಯ್ವಿಕ ಇಲ್ಲವೆ ಅಮಾನವೀಯ ಅಂಶಗಳು, ಕಲ್ಪನೆ, ಅವರ ಮವುಲ್ಯಗಳು, ಅನುಬವಿಸುವ ಸೌಂದರ್ಯ ಮೊದಲಾದವುಗಳು

3. ಆ ಮಾತುಗಳು ತಿಳಿದುಕೊಂಡಿರುವ ಪ್ರಾಣಿ, ಪಕ್ಷಿಗಳು, ಅವರ ಬೂಗೋಳ, ಕಗೋಳ, ಪಂಚಾಂಗ ಈ ಮೊದಲಾದವುಗಳು

4. ಆ ಮಾತುಗಳ ಗಣಿತ, ವಯಿದ್ಯಕೀಯ ಮೊದಲಾದ ಅರಿವುಗಳು

5. ಆ ಮಾತುಗಳದೆ ಆದ ವಿಶಿಶ್ಟ ಅಂಶಗಳು

6. ಆ ಮಾತುಗಳ ಸಮುದಾಯಗಳ ವಿಶಿಶ್ಟಾಂಶಗಳು

7. ಆ ಮಾತುಗಳ ವೀರರ–ಸಾಂಸ್ಕ್ರುತಿಕ ವೀರರ, ಇತಿಹಾಸದ ಪರಿಚಯ ಮಾಡಿಕೊಡುವಂತಾ ಕತೆಗಳು, ಲಾವಣಿಗಳು ಮೊದಲಾದವುಗಳು

8. ಆ ಮಾತುಗಳು ನಿರ್ದಿಶ್ಟ ನೆಲದಾಗ ನೆಲೆಗೊಂಡಿದ್ದರೆ ಆ ನೆಲದ ವಿಶಿಶ್ಟಾಂಶಗಳು

9. ಆ ಮಾತುಗಳ ಆಟಗಳು

10. ಆ ಮಾತುಗಳ ಸಮುದಾಯದವರ ದಿನಜೀವನದ ಅಂಶಗಳು

11. ಆ ಮಾತುಗಳ ಸಮುದಾಯದವರ ಉದ್ಯೋಗಕ್ಕೆ ಸಂಬಂದಪಟ್ಟ ಅಂಶಗಳು

ಹೀಗೆ, ಈ ಮೊದಲಾದ ಅಂಶಗಳನ್ನು ಇಲ್ಲಿ ಕೊಡಬಹುದು.

ಇಲ್ಲಿಂದ ಮುಂದೆ ಎರಡನೆಯ ತರಗತಿಯಾಗ ಈ ಎಲ್ಲ ಅಂಶಗಳನ್ನು ಇನ್ನಶ್ಟು ಅಗ್ಗಲಿಸಿಕೊಳ್ಳಬಹುದು. ಆದರೆ ಅದೆ ವೇಳೆಗೆ ಆ ಮಕ್ಕಳನ್ನು ಆಯಾ ಪ್ರದೇಶದ ರಾಜ್ಯಗಳ ಮಾತುಗಳ ವಾತಾವರಣವನ್ನು ಪರಿಚಯಿಸುವುದಕ್ಕೆ ಪೂರಕವಾಗುವಂತೆ ಕೆಲವು ಅಂಶಗಳನ್ನು ಕೊಡಬಹುದು. ಇದು ಮೊದಲು ಆ ಬುಡಕಟ್ಟು ಮಾತು ಆ ನಾಡಿನ ಮಾತಿನೊಂದಿಗೆ ಇಟ್ಟುಕೊಂಡಿರುವ ಸಂಬಂದವನ್ನು ತೋರಿಸುವುದರೊಂದಿಗೆ

ಮೊದಲಾಗಬಹುದು. ಇದು ಮಕ್ಕಳು ತಮ್ಮ ಮಾತಿನೊಂದಿಗೆ ಉಳಿದುಕೊಂಡೂ ರಾಜ್ಯದ ಮಾತಿನೊಂದಿಗೆ ಬೆರೆಯುವುದಕ್ಕೆ ಅವಕಾಶವೊದಗಿಸಿಕೊಡುತ್ತದೆ. ಇದು ಮಾತುಗಳ ನಡುವಿನ ಸಾಮರಸ್ಯಕ್ಕೆ ಮುನ್ನುಡಿ ಬರೆಯುತ್ತದೆ.

ಮೂರನೆಯ ತರಗತಿಗೆ ಇದನ್ನು ಹೀಗೆ ಮುಂದುವರೆಸಿಕೊಂಡು ಹೋಗಬಹುದು. ಆದರೆ ನಾಡಿನ ಮಾತನ್ನು ಹೆಚ್ಚು ಕೊಡುವುದರತ್ತ ಗಮನ ಹರಿಸಬಹುದು. ಇಲ್ಲಿ ಆ ನಾಡಿನ ವಿಷಯಗಳನ್ನು ನಿಯಮಿತವಾಗಿ ತಂದುಕೊಡಬಹುದು. ಇಲ್ಲಿ ಮತ್ತೆ ನಾಡಿನ ಮಾತಿನಿಂದ ವಿಷಯವನ್ನು ಕೊಡುವಾಗ ನಾಡಿನ ಮಾತು ಆ ಬುಡಕಟ್ಟು ಮಾತಿನೊಂದಿಗೆ ಇಟ್ಟುಕೊಂಡಿರುವ ಸಂಬಂದವನ್ನು ಮುಕ್ಯವಾಗಿ ಗಮನದಾಗ ಇಟ್ಟುಕೊಳ್ಳಬೇಕು. ಇದರಾಗ ಪ್ರದೇಶವಾರು ವಯ್ವಿದ್ಯತೆಯನ್ನು ಗಮನದಾಗಿಟ್ಟುಕೊಳ್ಳಬೇಕು. ನಾಡಿಗೆಲ್ಲ ಒಂದೆ ಬಗೆಯ ಪಟ್ಯವನ್ನು ಕೊಡುವುದರ ಬದಲು ಪ್ರದೇಶವಾರು ಒಳನುಡಿಯನ್ನು ಗಮನದಲ್ಲಿಟ್ಟುಕೊಂಡು ಪಟ್ಯಗಳನ್ನು ಕಟ್ಟಬೇಕು. ಇದೆ ಮಾದರಿಯನ್ನು ಬುಡಕಟ್ಟು ಮಾತುಗಳ ಪಟ್ಯಗಳಾಗ ಆ ನಾಡಿನ ಮಾತನ್ನು ಸೇರಿಸುವಾಗ ಅನುಸರಿಸಬಹುದು. ಆ ಆ ಬುಡಕಟ್ಟು ಮಾತುಗಳು ಇರುವ ಪ್ರದೇಶದ ಒಳನುಡಿಯನ್ನು ಅಲ್ಲಿ ಕೊಡಬೇಕು. ಆ ಬಾಗದ ಮಕ್ಕಳು ನಾಡಿನ ಮಾತಿನ ಆ ಬಾಗದ ಒಳನುಡಿಯನ್ನು ಸಹಜವಾಗಿ ತಿಳಿದುಕೊಂಡಿರುವ ಸಾದ್ಯತೆಗಳಿರುತ್ತವೆ. ಅದರಾಗ ಆ ಬಾಗದ ಇತರ ಮಕ್ಕಳೊಂದಿಗೆ ಮತ್ತು ಬೇರೆ ಬೇರೆ ವ್ಯಕ್ತಿಗಳೊಂದಿಗೆ ವ್ಯವಹರಿಸಬಲ್ಲವರೂ ಆಗಿರುತ್ತಾರೆ. ಆದ್ದರಿಂದ ಆ ಒಳನುಡಿಯೊಂದಿಗೆ ಮಕ್ಕಳು ಹೊಂದಿರುವ ಸಂಬಂದವನ್ನು ಬಳಸಿಕೊಂಡು ಅವರನ್ನು ನಾಡಿನ ಮಾತಿನೊಂದಿಗೆ ಬೆಸೆಯಬಹುದು. ಇದು ಹೆಚ್ಚು ಸರಳವಾಗಬಹುದು. ಮುಂದೆ ನಾಡಿನ ಮಾತಿನಲ್ಲಿ ಒಳನುಡಿಯಿಂದ ಶಿಶ್ಟಮಾತಿಗೆ ಬದಲಾಯಿಸುವಂತೆಯೆ ಕ್ರಮೇಣ ಬುಡಕಟ್ಟು ಮಾತುಗಳಾಗ ಕೊಡುವ ನಾಡಿನ ಮಾತಿನ ಒಳನುಡಿಯನ್ನು ಮೆಲ್ಲಗೆ ಶಿಶ್ಟಮಾತಿನತ್ತ ಬದಲಾಯಿಸಬಹುದು.

ಈ ಬಗೆಯನ್ನು ನಾಲ್ಕನೆಯ ತರಗತಿಯಾಗ ಮುಂದುವರೆಸಿಕೊಂಡು ಹೋಗಬಹುದು. ಇಲ್ಲಿ ನಾಡಿನ ಮಾತಿಗೆ ಹೆಚ್ಚು ಜಾಗವನ್ನು ಕಾದಿಡಬಹುದು. ಮುಂದೆ ಪೂರ್ಣವಾಗಿ ಪಟ್ಯವನ್ನು ನಾಡಿನ ಮಾತಿನಾಗ ಕೊಡಲು ಪೂರ್ಣ ಸಿದ್ದತೆ ಆಗಬೇಕು. ಈ ನಿಟ್ಟಿನಾಗ ಮಕ್ಕಳು ಸಿದ್ದರಾಗಬೇಕು. ಮುಂದೆ ಅಯ್ದನೆಯ ತರಗತಿಯಾಗ ಹೆಚ್ಚು ಬಾಗ ಪಟ್ಯವನ್ನು ನಾಡಿನ ಮಾತಿನಾಗ ಕೊಡಬಹುದು. ಇಲ್ಲೆಲ್ಲ ಪಟ್ಯಗಳಾಗ ಕೊಡುವ ವಿಶಯ ವಸ್ತುಗಳ ಅಂತರವನ್ನು ಕೂಡಾ ಬುಡಕಟ್ಟು ಮಾತು ಮತ್ತು ನಾಡಿನ ಮಾತುಗಳ ನಡುವೆ ಪಟ್ಯದಾಗ ಇಟ್ಟುಕೊಂಡಿರುವ ಅಂತರದಂತೆಯೆ ಇಟ್ಟುಕೊಳ್ಳಬಹುದು. ಮುಂದೆ ಇದನ್ನು ನಾಡಿನ ಮಾತುಗಳಾಗ ಕೊಡುವ ಪಟ್ಯದೊಂದಿಗೆ ಸೇರಿಕೊಳ್ಳುವ ಹಾಗೆ. ನಾಡಿನ ಮಾತಿನಾಗಲೆ ಒಂದನೆಯ ತರಗತಿಯಿಂದ ಕಲಿತ ಮಗುವಿನೊಂದಿಗೆ ಸಮನಾಗಿ ನಿಲ್ಲುವ ಹಾಗೆ ಬುಡಕಟ್ಟು ಮಕ್ಕಳನ್ನು ತಯಾರಿಸಬೇಕು. ಹಾಗೆ ವಿಶಯವನ್ನು ವಿನ್ಯಾಸಗೊಳಿಸಬೇಕು.

...ಮುಂದೆ ಆರನೆಯ ತರಗತಿಯಿಂದ ಬುಡಕಟ್ಟು ಮಕ್ಕಳನ್ನು ಇತರ ಮಕ್ಕಳೊಂದಿಗೆ ಸಮಾನ ಶಿಕ್ಶಣಕ್ಕೆ ತಂದುಕೊಳ್ಳಬಹುದು. ಹೀಗೆ ತರುವಾಗ ಬುಡಕಟ್ಟು ಮಕ್ಕಳು ಮತ್ತು ಇತರ ಮಕ್ಕಳ ನಡುವೆ ಯಾವುದಾದರೂ ತುಂಬಬೇಕಾದ ಅಂತರಗಳು ಉಳಿದಿವೆಯೆ ಎಂಬುದನ್ನು ಅವಲೋಕಿಸಬೇಕು. ಅಲ್ಲಿಂದ ಮುಂದೆ ನಾಡಿನ ಮತ್ತು ದೇಶದ ಮಾತುಗಳು, ವಸ್ತು ವಿಶಯಗಳು ಮೊದಲಾವು ಮುಂದುವರೆಯಬಹುದು. ಯಾವುದೆ ಕಾರಣದಿಂದಲೂ ಬುಡಕಟ್ಟುಗಳ ಮಾತುಗಳಾಗ ಶಿಕ್ಶಣ ಪಡೆದವರು ಮತ್ತು ಆ ನಾಡಿನ ಮುಕ್ಯ ಮಾತಿನಾಗ ಶಿಕ್ಶಣ ಪಡೆದವರ ನಡುವೆ ಮೇಲು ಕೀಳು ಎಂಬ ಮನೋಬಾವ ಬರದಂತೆ ನೋಡಿಕೊಳ್ಳಬೇಕು. ಮುಂದಿನ ತರಗತಿಗಳಾಗ, ಉದ್ಯೋಗ ಒದಗಿಸುವಾಗ ಮೊದಲಾದ ಹಂತಗಳಾಗ ಇಟ್ಟುಕೊಳ್ಳಬಹುದಾದ ಕೆಲವು ಎಚ್ಚರಿಕೆಗಳಿಂದ ಇದನ್ನು ಸಾದಿಸಲು ಸಾದ್ಯ.

ಹೀಗೆ ಬುಡಕಟ್ಟು ಮಕ್ಕಳು ತಮ್ಮ ಮಾತಿನಿಂದ ನಾಡಿನ ಮಾತಿನ ಪಟ್ಯಕ್ಕೆ ತಿರುಗಿದ ಬಳಿಕ ಅವರಿಗೆ ಅವರ ಮಾತುಗಳಾಗ ಓದುವುದಕ್ಕೆ ಪಟ್ಯಗಳು ಇರುವಂತೆ ನೋಡಿಕೊಳ್ಳಬೇಕು. ಅವರ ಸಾಹಿತ್ಯವನ್ನು ಪ್ರಕಟಿಸಬೇಕು. ಅದರೊಂದಿಗೆ ಇತರೆಲ್ಲ ಬಗೆಯ ಕೆಲಸಗಳನ್ನು ಮಾಡಿಕೊಳ್ಳಬೇಕು. ಅಂದರೆ ಮುಂದೆಯೂ ಅವರು ತಮ್ಮ ಮಾತಿನೊಂದಿಗೆ ಓದು-ಬರಹಗಳನ್ನು ಉಳಿಸಿಕೊಳ್ಳುತ್ತಾರೆ.

ಪಟ್ಯ ಪುಸ್ತಕಗಳು ಬುಡಕಟ್ಟು ಮಕ್ಕಳನ್ನು ತಮ್ಮ ಮಾತಿನಾಗ ಚಿಂತಿಸಲು ತೊಡಗಿಸುತ್ತವೆ. ಅಂದರೆ ಇದು ಅವರ ಮಾತಿನಾಗ ಅರಿವಿನ ಹರಹಿಗೆ ಕಾರಣವಾಗುತ್ತವೆ.

ಈಗಾಗಲೆ ಬುಡಕಟ್ಟುಗಳಾಗ ಪಟ್ಯ ತಯಾರಿಸುವ ಕೆಲವು ಪ್ರಯತ್ನಗಳಾಗಿವೆ. ಆದರೆ ಅವುಗಳು ಜಾರಿಗೆ ತರುವ ಹಂತದಾಗ ಲೆಕ್ಕಿಸಿದಶ್ಟು ಸಾದನೆ ತಲುಪಿಲ್ಲ. ಇದಕ್ಕೆ ಕಾರಣಗಳೇನಿರಬಹುದು ಎಂಬುದರತ್ತ ಒಂದಶ್ಟು ನೋಡಬಹುದು.

ಇಂದಿನ ಸಮಾಜದಾಗ ಕನ್ನಡ, ತಮಿಳು, ಬಾಂಗ್ಲಾದಂತಾ ದೊಡ್ಡ ಮಾತುಗಳು ಕೂಡಾ ಇಂಗ್ಲೀಶಿನ ಬಯವನ್ನು ಅನುಬವಿಸುತ್ತಿವೆ ಎಂದು ಹೇಳಲಾಗುತ್ತಿದೆ. ಅಲ್ಲದೆ ಈ ಮಾತುಗಳಾಗ ಕಲಿಯುವುದಕ್ಕಿಂತ ಇಂಗ್ಲೀಷಿನಾಗ ಕಲಿಯುವುದರ ಮೂಲಕ ಒಳ್ಳೆಯ ಉದ್ಯೋಗ ಬೇಟೆಗೆ ಅನುಕೂಲವಾಗುತ್ತದೆ ಎಂಬ ತಿಳುವಳಿಕೆ ವ್ಯಾಪಕವಾಗಿದೆ. ಬಾರತೀಯ ಸಮಾಜವೂ ಇದಕ್ಕೆ ಒಂದಶ್ಟು ಪೂರಕವಾಗಿದೆ ಎಂದು ಹೇಳಬಹುದು. ಆದರೆ ಶಿಕ್ಶಣ ಕೊಡುವ ಮಾದ್ಯಮ ಮನೆಮಾತೆ ಆಗಿರಬೇಕು ಎಂಬ ಮನಸದ್ಯಯನಕಾರರ ಮಾತನ್ನು ಕಡೆಗಣಿಸಲಾಗದು. ಇಂಗ್ಲೀಶಿನ ವ್ಯಾಮೋಹವನ್ನು ಕಡಿಮೆ ಮಾಡುವತ್ತ ಭಾರತೀಯ ಶಿಕ್ಶಣ ಮುಂದಾಗಬೇಕಿದೆ.

ಇನ್ನುಳಿದಂತೆ ಮನೆಮಾತಿನಾಗ ಶಿಕ್ಶಣ ಪಡೆಯಬೇಕಾದ ಅವಶ್ಯಕತೆಯನ್ನು ಬುಡಕಟ್ಟು ಮಂದಿಗೆ ಮನವರಿಕೆ ಮಾಡಿಕೊಡಬೇಕು. ಈ ನಿಟ್ಟಿನಾಗ ಸಮಾಜ ಸೇವಾ ಸಂಸ್ತೆ ಮೊದಲಾದವುಗಳ ಸಹಾಯ ಪಡೆದುಕೊಳ್ಳಬಹುದು. ಇದೆಲ್ಲವಕ್ಕೆ ಪೂರಕವಾಗಿ ಉದ್ಯೋಗಾವಕಾಶಗಳು ಕೆಲವೆ ಮಕ್ಕಳಿಗೆ ಮೀಸಲಾಗಿರುವಂತಾ ಈಗಿನ ಸ್ತಿತಿಯಿಂದ

ಸಮಾಜ ಹೊರಬರಬೇಕಾಗಿದೆ. ಇದುವೆ ಬಹು ಮುಖ್ಯವಾದ ಅಂಶವಾಗಿದೆ.

ಬುಡಕಟ್ಟು ಮಕ್ಕಳಿಗೆ ಶಿಕ್ಶಣ ಕೊಡಲು ಆ ಬುಡಕಟ್ಟುಗಳಿಂದ ಶಿಕ್ಶಕರನ್ನು ಆರಿಸಬೇಕಿದೆ. ಇದು ಶಿಕ್ಶಣ ಪರಿಣಾಮಕಾರಿಯಾಗಲು ಇರುವ ಒಂದು ಮಹತ್ವದ ಅಂಶ. ಈಗಾಗಲೆ ಸುತ್ತಲಿನ ಮಾತುಗಳಾಗ ಶಿಕ್ಶಕರಾಗಿ ಕೆಲಸ ಮಾಡುತ್ತಿರುವವರನ್ನು ಆರಿಸಿ ಅವರಿಗೆ ವಿಶೇಶ ತರಬೇತಿಯನ್ನು ನೀಡಿ ಅವರ ಮಾತಿನಾಗ ಪಾಟ ಹೇಳಲು ಅವರನ್ನು ಸಿದ್ದಗೊಳಿಸಬೇಕು. ಈ ರೀತಿಯಲ್ಲಿ ಬೋದನೆಗೆ ಮುಂದಾಗುವ ಶಿಕ್ಶಕರನ್ನು ಬೆಂಬಲಿಸಬೇಕು. ಇದಕ್ಕೆ ಮತ್ತೆ ಸಮಾಜ ಸೇವಾ ಸಂಸ್ತೆಗಳ ಸಹಕಾರವನ್ನು ಪಡೆದುಕೊಳ್ಳಬಹುದು.

ಅವರ ಮಾತುಗಳಲ್ಲಿ ಶಿಕ್ಶಣವನ್ನು ಕೊಡುವುದರ ಮೂಲಕ ಅವರದೆ ಆದ ವಿಶ್ವನೋಟವನ್ನು ಉಳಿಸಿಕೊಳ್ಳಲು ಸಾದ್ಯವಾಗುತ್ತದೆ. ಅಲ್ಲದೆ ಬುಡಕಟ್ಟುಗಳನ್ನು ಇಂದಿನ ಆದುನಿಕ ಸಮಾಜಕ್ಕೆ ತೆಗೆದುಕೊಂಡು ಬರಲು ಸಾದ್ಯವಾಗುತ್ತದೆ. ಬುಡಕಟ್ಟು ಮಕ್ಕಳು ಅವರ ಮಾತಿನಾಗ ಶಿಕ್ಶಣ ಪಡೆಯುವುದಾದರೆ ಹೆಚ್ಚು ಬೇಗ ತಮ್ಮ ಪ್ರತಿಬೆಯನ್ನು ತೋರಿಸಲು ಸಾದ್ಯವಾಗುತ್ತದೆ. ನಾಡಿಗೆ ಇದುವರೆಗೆ ದೂರವಾಗಿರಿಸಿಕೊಂಡಿರುವ ಬುಡಕಟ್ಟು ಪ್ರತಿಬೆಗಳು ದೊರೆಯುತ್ತವೆ. ಆಗ ಅವರ ಹಕ್ಕುಗಳಿಗಾಗಿ ಅವರೆ ಮಾತನಾಡಲು ಮುನ್ನಾಗುತ್ತಾರೆ. ಅವರ ಮುಂದನ್ನು ಅವರೆ ನಿರ್ದರಿಸುತ್ತಾರೆ. ಅವರಿಗೆ ನಿರ್ದಾರ ತೆಗೆದುಕೊಳ್ಳುವ ಹಂತಕ್ಕೆ ತರಬೇಕಾದ ಅವಶ್ಯಕತೆ ಇದೆ. ಅವರಿಗೆ ಪರಿಹಾರ ಕೊಡುವ, ಆಶ್ರಯ ಕೊಡುವ, ಸಹಾಯ ಮಾಡುವ ಈ ಎಲ್ಲ ಬಗೆಗಳಿಗಿಂತ ಇದು ಬಲು ಎತ್ತರದ ದಾರಿಯಾಗುತ್ತದೆ.



ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ–ಜೂನ್, ೨೦೧೩

# ೬. ಶ್ರಮಣ ಸಂಸ್ಕೃತಿ

–ವಿದುಷಿ, ಪಿ. ಎಚ್. ವಿಜಯಲಕ್ಷ್ಮಿ*

ಡಾರ್ವಿನ್‌ನ ವಿಕಾಸವಾದದ ಪ್ರಕಾರ–ಮಂಗನಿಂದ ಮನುಷ್ಯನಾಗಿ ಪರಿವರ್ತಿತನಾಗುತ್ತಾ ಹೋದ ಮಾನವ ಬದುಕಲು ತನ್ನ ಅಗತ್ಯತೆಗಳಿಗನುಗುಣವಾಗಿ ಹೇಗೆ ಬದುಕಬೇಕೆಂಬುದನ್ನೂ ಕಲಿಯುತ್ತಾ ಹೋದ. ಮೃಗದಂತೆ ಜೀವಿಸುತ್ತಿದ್ದವನು ಕ್ರಮೇಣ ತನ್ನ ಜೀವನ ಶೈಲಿಯನ್ನು ಬದಲಿಸಿಕೊಂಡ. ಏಕೆಂದರೆ ಪ್ರಾಣಿಗಳಲ್ಲೆಲ್ಲಾ ಬುದ್ಧಿವಂತಿಕೆಯಿಂದ ಚಿಂತಿಸುವ ಶಕ್ತಿ ಮನುಷ್ಯನಿಗೆ ಮಾತ್ರ ದೊರೆತದ್ದು ಭಗವಂತನ ಅನುಗ್ರಹ. ಹಾಗಾಗಿ ಆತನ ನಡೆ–ನುಡಿಗಳಲ್ಲಿ, ಆಚಾರ–ವಿಚಾರಗಳಲ್ಲಿ ಕ್ರಮಕ್ರಮವಾಗಿ ಸುಧಾರಣೆಗಳು ಬೆಳೆದುಕೊಂಡುಬಂದವು. ಯಾವ ಒಳ್ಳೆಯ ಬದುಕಿತ್ತೋ, ಒಳ್ಳೆಯ ಆಚರಣೆಯಿತ್ತೋ, ಒಳ್ಳೆಯ ರೀತಿ–ರಿವಾಜುಗಳಿದ್ದವೋ, ಯಾವ ಒಳ್ಳೆಯ ಸುಸಂಸ್ಕೃತವಾದ ಯೋಚನೆಯಿತ್ತೋ–ಅದೆಲ್ಲವೂ ಸಂಸ್ಕೃತಿಯೆಂಬ ಹೆಸರಿನಲ್ಲಿ ಗುರುತಿಸಿಕೊಂಡಿತು. ಅಂದರೆ ಸಮ್ಯಕ್ ಕೃತಿ–ಸಂಸ್ಕರಿಸಲ್ಪಟ್ಟ ಅಥವಾ ಉತ್ತಮ ಕರ್ಮಗಳೆಲ್ಲವೂ ಸಂಸ್ಕೃತಿಯ ವ್ಯಾಪ್ತಿಯಲ್ಲೇ ಬರುತ್ತವೆ. ಈ ಹಿನ್ನೆಲೆಯಲ್ಲಿ ಸಂಸ್ಕೃತಿಯ ಅರ್ಥವೂ ವ್ಯಾಪಕವಾದದ್ದೇ. ಪರಂಪರಾಗತವಾಗಿರುವ ಆಚರಣೆ, ವಿಶೇಷವಾಗಿ ಸಭ್ಯತೆಯಿಂದ ಕೂಡಿದ ಎಲ್ಲವೂ ಸಂಸ್ಕೃತಿಯೆನಿಸಿಕೊಳ್ಳುತ್ತದೆ. ಇಂತಹ ಸಂಸ್ಕೃತಿಯು ದೇಶ, ಭಾಷೆ, ಜನಾಂಗಗಳಿಗನುಗುಣವಾಗಿ ಬದಲಾಗುವುದೂ ಸಹಜವೇ. ಹಾಗಾಗಿ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿರುವ, ಭವ್ಯ ಇತಿಹಾಸ ಮತ್ತು ಪರಂಪರೆಯುಳ್ಳ ನಮ್ಮ ಭಾರತದಲ್ಲಿಯೂ ಹಲವು ಸಂಸ್ಕೃತಿಗಳನ್ನು ಗಮನಿಸಬಹುದು.

ಬಹು ಬಹುಮುಖ್ಯವಾಗಿ ಪ್ರಪ್ರಾಚೀನ ಯುಗದಿಂದಲೂ ಗುರುತಿಸಿಕೊಂಡಿರುವ ಸಂಸ್ಕೃತಿಗಳಲ್ಲಿ ವೈದಿಕ ಸಂಸ್ಕೃತಿ ಒಂದೆಡೆಯಾದರೆ, ಮತ್ತೊಂದೆಡೆ ಶ್ರಮಣ ಸಂಸ್ಕೃತಿಯೂ ಅಷ್ಟೇ ಪ್ರಮಾಣದಲ್ಲಿ ಹರಡಿಕೊಂಡಿದೆ. ಬ್ರಹ್ಮವಿದ್ಯೆಯನ್ನು ಕುರಿತಾದ, ಆ ದಿಶೆಯಲ್ಲಿನ

*ಸಾಹಿತ್ಯ ಸಹಾಯಕರು, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು.
ಮೊಬೈಲ್ : ೯೮೪೪೧ ೯೩೬೨೮

ಆಚಾರ–ವ್ಯವಹಾರಗಳನ್ನೊಳಗೊಂಡ ಹಿಂದೂ ಸಂಸ್ಕೃತಿಯು ವೈದಿಕ ಸಂಸ್ಕೃತಿಯೆನಿಸಿಕೊಂಡರೆ, ಜೈನ ಮತ್ತು ಬೌದ್ಧರ ಆಚಾರ–ವಿಚಾರಗಳಿಗೆ ಸಂಬಂಧಪಟ್ಟ ಪರಂಪರೆ ಶ್ರಮಣ ಸಂಸ್ಕೃತಿಯೆನಿಸಿಕೊಂಡಿತು.

'ಶ್ರಮಣ' ಎನ್ನುವ ಶಬ್ದಕ್ಕೆ ಪ್ರಾಕೃತ ಭಾಷೆಯಲ್ಲಿ 'ಸಮನ' ಅಥವಾ 'ಸುಮನ' ಎಂದರ್ಥವಾಗುತ್ತದೆ. ರಾಗದ್ವೇಷಗಳಿಲ್ಲದ ಅತ್ಯಂತ ಪ್ರಶಾಂತವಾದ ಸ್ಥಿತಿಯನ್ನು 'ಸಮನ' ಅಥವಾ 'ಸಮತಾ' ಎನ್ನಲಾಗಿದೆ. (ಸರ್ವಾರ್ಥಸಿದ್ಧಿ, ಪುಟ–೧) ಒಳ್ಳೆಯ ಅಥವಾ ಸುಸಂಸ್ಕೃತವಾದ ಮನಸ್ಸು ಎಂದರ್ಥ ಕೊಡುವ ಸುಮನ ಶಬ್ದವೂ ಇದ್ದೇ ಸೂಚಿಸುತ್ತದೆ. ಅಂದರೆ ಅರಿಷಡ್ವರ್ಗಾದಿಗಳ ವಿಷಯದಲ್ಲಿ ಚಂಚಲಿತರಾಗದೆ ಸಮಚಿತ್ತದಿಂದ ವರ್ತಿಸುವ ಭಾವ. ಹಾಗಾಗಿಯೇ ಜೈನ ಸಂಸ್ಕೃತಿಯಲ್ಲಿ ಶತ್ರು–ಮಿತ್ರರೆಂಬ ಭಾವನಾ ರಹಿತ ಸ್ಥಿರಚಿತ್ತಾತ್ಮರನ್ನು, ಈ ಕಾರಣದಿಂದಾಗಿಯೇ ಸಾಧ್ಯವಾಗುವ ಸಾಧಕತ್ವಭಾವ ಹೊಂದಿದವರನ್ನು 'ಶ್ರಮಣ'ರೆಂದು ಕರೆಯುತ್ತಾರೆ.

ಸುಭಾಷಿತಗಳಲ್ಲಿಯೂ ಇಂತಹ ಸಮಸ್ಥಿತಿಯುಳ್ಳವರ ಸ್ವಭಾವವನ್ನು ಹೀಗೆ ವರ್ಣಿಸಲಾಗಿದೆ.

ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।
ಲೋಕೋತ್ತರಾಣಾಂ ಚರಿತಂ ಕೋಹಿ ವಿಜ್ಞಾತುಮರ್ಹತಿ ॥

ವಜ್ರಕ್ಕಿಂತಲೂ ಕಠೋರವಾದ, ಹೂವಿಗಿಂತಲೂ ಮೃದುವಾದ ಲೋಕವಿಶಿಷ್ಟ ಚೇತನಗಳ ಗುಣವನ್ನು ಯಾರಿಗೆ ತಾನೇ ಅರಿಯಲು ಸಾಧ್ಯ? ಇಂತಹ ಸ್ಥಿತಿ ಸಾಧಕರಿಗೆ ಮಾತ್ರ ಸಾಧ್ಯವಾಗುವಂತಹದ್ದು. ಜೈನ ಸಂಸ್ಕೃತಿಗೆ ಅನ್ವಯಿಸುವುದಾದರೆ, ಸಾಧನೆಯ ವಿಷಯದಲ್ಲಿ ಎಂತಹ ಕಠಿಣತರವಾದದ್ದನ್ನೂ ಸಾಧ್ಯವಾಗಿಸಿಕೊಳ್ಳುವ, ಕರುಣೆ–ದಯೆ ಮೊದಲಾದ ಕೋಮಲ ಸ್ವಭಾವಗಳ ಅಗತ್ಯತೆ ಕಂಡುಬಂದಾಗ ಶಾಂತಹೃದಯಿಗಳಾಗುವ ಸಜ್ಜನಿಕೆಯುಳ್ಳವರು ಶ್ರಮಣರು. 'ಶ್ರಾಮ್ಯಂತಿ ಬಾಹ್ಯಾಭ್ಯಂತರಂ ತಪಶ್ಚರಂತೀತಿ ಶ್ರಮಣಃ' ಅಂದರೆ ಶುಭಾಶುಭಕ್ರಿಯೆಗಳಲ್ಲಿ, ಪುಣ್ಯಾಪಾಪಗಳನ್ನು ಅನುಭವಿಸುವುದರಲ್ಲಿ, ಸುಖ–ದುಃಖಗಳಲ್ಲಿ ಯಾವುದೇ ಸಂದರ್ಭಗಳಲ್ಲಿಯೂ ಕೂಡ ಚಿತ್ತಸ್ವಾಸ್ಥ್ಯ ಕಳೆದುಕೊಳ್ಳದೆ ಸಮಭಾವದಿಂದ ಬಂದದ್ದೆಲ್ಲವನ್ನೂ ಪ್ರಸನ್ನತೆಯಿಂದ ಸ್ವೀಕರಿಸುವುದು. ಹೊರಗಿನ ಮತ್ತು ಒಳಗಿನ ಯಾವುದೇ ಲೌಕಿಕ ಸಂಬಂಧಿತ ಬೇಡಿಕೆಗಳನ್ನು ವರ್ಜಿಸಿ, ತಪಸ್ಸಾಧನೆ ಮಾಡುವವರೇ ಶ್ರಮಣರು.

ಭಗವತ್ಕುಂದಕುಂದಾಚಾರ್ಯರು ತಮ್ಮ ಪ್ರವಚನಸಾರದಲ್ಲಿ ಶ್ರಮಣರನ್ನು ಕುರಿತು ಹೀಗೆ ಹೇಳಿದ್ದಾರೆ.

ಸಮಶತ್ರುಬಂಧುವರ್ಗಃ ಸಮಸುಖದುಃಖಃ ಪ್ರಶಂಸಾನಿಂದಾಸಮಃ ।
ಸಮಲೋಷ್ಟಕಾಂಚನಃ ಪುನರ್ಜೀವಿತಮರಣೇ ಸಮಃ ಶ್ರಮಣಃ ॥

(ಪ್ರವಚನಸಾರ : ೩.೨೪೧)

ಇಲ್ಲಿಯೂ ಕೂಡ ಹಿಂದಿನ ಭಾವವನ್ನೇ ಗಮನಿಸುತ್ತೇವೆ. ಅಂದರೆ ಶತ್ರು ಅಥವಾ ಬಂಧು ಯಾರೇ ಆಗಿರಲಿ, ಅವರನ್ನು ಸಮಾನ ಭಾವದಿಂದ ಗೌರವಿಸುವುದು, ಸುಖವೇ ಬರಲಿ, ದುಃಖವೇ ಬರಲಿ ಸಂತೋಷದಿಂದ ಸ್ವೀಕರಿಸುವುದು, ಹೊಗಳಿಕೆಯಿಂದ ಹಿಗ್ಗದೆ, ತೆಗಳಿಕೆಯಿಂದ ಕುಗ್ಗದೆ ಸ್ಥಿರಭಾವದಿಂದಿರುವುದು ಕಬ್ಬಿಣವಿರಲಿ, ಬಂಗಾರವಿರಲಿ ನಿರ್ಮೋಹದಿಂದಿರುವುದು, ಹುಟ್ಟು-ಸಾವುಗಳ ವಿಷಯದಲ್ಲಿಯೂ ನಿಶ್ಚಿಂತರಾಗಿರುವುದು ಶ್ರಮಣರ ಲಕ್ಷಣ.

ಶ್ರಮಣರೆಂದರೆ ಜೈನ ಮುನಿಗಳೆಂದೇ ಅರ್ಥ, ಅವರನ್ನು ಕುರಿತಾಗಿ ನಿರ್ದಿಷ್ಟಪಡಿಸಿದ ಕೆಲವು ಲಕ್ಷಣಗಳನ್ನೇ ಹೇಳಲಾಗುತ್ತದೆ.

ಉರಗಗಿರಿ ಜಲಣ ಸಾಗರಣ ಹತಲ ತರುಗಣ ಸಮೋಅ ಹೋ ಹೋಇ
ಭಮರ ನಿಯಧರಣಿ ಜಲರುಹರವಿಪವಣ ಸಮೋ ಅಸೋ ಸಮಣೋ ॥

ಹಾವು, ಬೆಟ್ಟ, ಬೆಂಕಿ, ಸಮುದ್ರ, ಆಕಾಶ, ದುಂಬಿ, ಜಿಂಕೆ, ಭೂಮಿ, ತಾವರೆ, ಸೂರ್ಯ ಮತ್ತು ಗಾಳಿ-ಇವುಗಳ ಗುಣಲಕ್ಷಣಗಳನ್ನೊಂದಿರುವವರು ಶ್ರಮಣರು. ಅಂದರೆ ನೆಲವೇ ಹಾಸಿಗೆ, ಅಕಾಶವೇ ಹೊದಿಕೆಯೆಂಬಂತೆ, ಕುವೆಂಪು ಅವರ ಅನಿಕೇತನನಂತೆ (ಸ್ವಂತ ನೆಲೆಯಿಲ್ಲದವನಂತೆ) ತನಗಾಗಿಯೆಂದೇ ವಾಸಸ್ಥಳವನ್ನು ನಿರ್ಮಿಸಿಕೊಳ್ಳದೆ ಹೇಗೆ ಉರಗಗಳು ಗೆಜ್ಜಲು ಹುಳುಗಳು ನಿರ್ಮಿಸಿದ ಹುತ್ತದಲ್ಲಿ ವಾಸಿಸುತ್ತವೆಯೋ (ಅಂದರೆ ತಮಗಾಗಿ ಎಂದೂ ಗೂಡು ಕಟ್ಟಿಕೊಳ್ಳುವುದಿಲ್ಲವೋ) ಹಾಗೆ ಪ್ರಕೃತಿ ಸಹಜ ಗುಹೆಗಳು ಅಥವಾ ಜನಸಮೂಹ ವಸತಿಗಾಗಿ ನಿರ್ಮಿಸಿದಂತಹ ಮಠ ಅಥವಾ ಚೌಕಿಯೆಂದು ಕರೆಯಿಸಿಕೊಳ್ಳುವ ಸ್ಥಳಗಳಲ್ಲಿ ವಾಸಿಸಬೇಕು. ಎಂತಹುದೇ ಬಿರುಗಾಳಿ, ಸುಂಟರಗಾಳಿಗೂ ಕಿಂಚಿತ್ತೂ ಅಲುಗಾಡದೆ ನಿಂತ ನೆಲೆಯಲ್ಲಿಯೇ ಬೆಟ್ಟಗಳು ಹೇಗೆ ಅಚಲವಾಗಿರುತ್ತವೆಯೋ ಹಾಗೆ ಸಾಧನೆಯ ಹಾದಿಯಲ್ಲಿ ಬಂದೊದಗುವ ಕಷ್ಟ-ಕಾರ್ಪಣ್ಯಗಳನ್ನು ಅಂಜದೆ, ಅಳುಕದೆ ಸ್ಥಿರಚಿತ್ತದಿಂದ ಎಲ್ಲವನ್ನೂ ಸಂಯಮದಿಂದ ಸಹಿಸಿಕೊಂಡು ಗುರಿಯತ್ತ ಮುನ್ನಡೆಯಬೇಕು. ಅಗ್ನಿಯ ದಹನಶಕ್ತಿಗೆ ಹೇಗೆ ತೃಪ್ತಿಯೆಂಬುದಿಲ್ಲವೋ ಅಂದರೆ ತನ್ನತ್ತ ಬಂದ ಎಲ್ಲವನ್ನೂ ಕ್ಷಣಾರ್ಧದಲ್ಲಿ ಸುಟ್ಟು ಭಸ್ಮಮಾಡಿ ತನ್ನ ದಾಹಕ ಶಕ್ತಿಯ ಸೂಚಕಗಳಾದ ಕೆನ್ನಾಲಗೆಗಳನ್ನು ಹೇಗೆ ಮತ್ತೂ ಚಾಚಿಕೊಂಡಿರುತ್ತದೆಯೋ ಹಾಗೆಯೇ ಮುನಿಗಳೂ ಕೂಡ ತಮ್ಮ ಆಚರಣೆಗಳ ವಿಷಯದಲ್ಲಿ, ತಪಸ್ಸಿನಲ್ಲಿ, ಧ್ಯಾನದಲ್ಲಿ, ಸಿದ್ಧಿಯ ಮಾರ್ಗದಲ್ಲಿ ತೃಪ್ತಿಯೆಂಬುದಿರದೆ ಒಂದು ರೀತಿಯ ಹಪಹಪನೆ (ತೀರದ ಹಸಿವು ಅಥವಾ ತುಡಿತ)ಯಿರಬೇಕು. ಯಾವ ಘನಗಾಂಭೀರ್ಯದಿಂದ ಅಗಾಧವಾದ ಸಮುದ್ರವು ಪ್ರಶಾಂತವಾಗಿ ಗೋಚರಿಸುತ್ತದೆಯೋ ಹಾಗೆ ಶ್ರಮಣರೂ ಕೂಡ ಹೊರಜಗತ್ತಿನೊಂದಿಗೆ ಯಾವುದೇ ಸಂಪರ್ಕಗಳನ್ನಿಟ್ಟುಕೊಳ್ಳದೆ ಅಂದರೆ ಜಗತ್ತಿನ ಪರಿವೆಯೇ ಇಲ್ಲದೆ ಸದಾ ಆತ್ಮಚಿಂತನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಗಾಂಭೀರ್ಯಯುಕ್ತರಾಗಿರಬೇಕು.

ಆಕಾಶವು ಹೇಗೆ ಸ್ವಚ್ಛ ಮತ್ತು ನಿರಾಲಂಬನವಾಗಿದೆಯೋ ಹಾಗೆಯೇ ಜೈನಮುನಿಗಳೂ ಕೂಡ ಕಲ್ಮಶರಹಿತ ಮನಸ್ಸುಳ್ಳವರಾಗಿ, ತಮ್ಮ ಯಾವುದೇ ಬಾಹ್ಯಾಂತರ ಆಚರಣೆಗಳಿಗೆ ಅರ್ಥಾತ್ ತಮ್ಮ ಸಿದ್ಧಿಸಾಧನೆಗೆ ಯಾರನ್ನೂ ಅವಲಂಬಿಸದೆ ಸ್ವತಂತ್ರರಾಗಿ ಸಾಧನಾಮಾರ್ಗದಲ್ಲಿ ಕಾರ್ಯೋನ್ಮುಖರಾಗಬೇಕು.

ದುಂಬಿಯು ಹೇಗೆ ಪುಷ್ಪಗಳನ್ನು ಘಾಸಿಗೊಳಿಸದೆ ಅಥವಾ ಅವುಗಳಿಗೆ ನೋವುಂಟುಮಾಡದೆ ಅವುಗಳಲ್ಲಿಂಯ ಮಕರಂದವನ್ನು ಹೀರಿ ಸಂತೋಷಗೊಳಿಸುತ್ತದೆಯೋ ಹಾಗೆ ಮುನಿಗಳೂ ಕೂಡ ತಮ್ಮ ಆಹಾರಕ್ಕಾಗಿ ಒತ್ತಾಯಪೂರ್ವಕವಾಗಿ ಯಾರನ್ನೂ ಆಶ್ರಯಿಸದೆ ಶ್ರಾವಕರಿಂದ ಅರಸಿಬಂದ ಆಹಾರವನ್ನಷ್ಟೇ ಸ್ವೀಕರಿಸಿ, ಅದರಿಂದ ತಾವೂ ತೃಪ್ತರಾಗಿ ಶ್ರಾವಕರನ್ನೂ ಸಂತೋಷಗೊಳಿಸಬೇಕು. ಶ್ವೇತಾಂಬರರಲ್ಲಿ ಇದು 'ಭ್ರಾಮರೀ ವೃತ್ತಿ' ಎನಿಸಿಕೊಂಡರೆ, ದಿಗಂಬರರಲ್ಲಿ 'ಗೋಚರೀ ವೃತ್ತಿ' ಆಚರಣೆಯಲ್ಲಿದೆ.

ಸೌಮ್ಯ ಸ್ವಭಾವದ ಜಿಂಕೆಯು ಸದಾಕಾಲ ಪ್ರಾಣಭೀತಿಯಿಂದ ಭಯಗ್ರಸ್ತವಾಗಿಯೇ ಇರುತ್ತದೆ. ಕಾಡಿನ ಕ್ರೂರ ಮೃಗಗಳಾದ ಹುಲಿ, ಚಿರತೆ, ಸಿಂಹಗಳೇ ಮೊದಲಾದವುಗಳಿಗೆ ಜಿಂಕೆಗಳು ಬಹುಬೇಗ ತುತ್ತಾಗುತ್ತವೆ. ಹಾಗಾಗಿ ನಿತ್ಯ ಭಯದಿಂದಲೇ ಬದುಕುವ ಜಿಂಕೆಗಳು ಹೇಗೆ ಮೈಯೆಲ್ಲಾ ಕಣ್ಣಾಗಿ ತಮ್ಮನ್ನು ತಾವು ರಕ್ಷಿಸಿಕೊಳ್ಳುವುದರಲ್ಲಿಯೇ ಸದಾ ಮಗ್ನವಾಗಿ ಜಾಗರೂಕತೆಯಿಂದಿರುತ್ತವೆಯೋ ಹಾಗೆಯೇ ಮುನಿಗಳೂ ಕೂಡ ಲೌಕಿಕ ಸೆಳೆತಗಳ ವಿಚಾರದಲ್ಲಿ ಎಚ್ಚರಿಕೆಯಿಂದಿರಬೇಕು. ಯಾವ ಆಮಿಷಗಳೂ ತಮ್ಮ ಬಳಿ ಸುಳಿಯದಂತೆ ಸದಾ ಧ್ಯಾನಮಗ್ನರಾಗಿರಬೇಕು. ಹಾಗೆಯೇ ಭೂಮಿತೂಕದ ಸಹನೆಯೂ ಅವರಲ್ಲಿರಬೇಕು. ಏಕೆಂದರೆ ಸಹನೆ, ತಾಳ್ಮೆಗಳಲ್ಲಿ ಭೂಮಾತೆ ಅವಳಿಗವಳೇ ಸಾಟಿ. ಹಾಗೆಂದೇ 'ಕ್ಷಮಯಾ ಧರಿತ್ರಿ' ಎನ್ನುತ್ತೇವೆ. ಸಾಧನೆಯ ಹಾದಿಯಲ್ಲಿ ಎದುರಾಗುವ ಎಂತಹ ಕಠಿಣ ಸಂದರ್ಭಗಳನ್ನೂ ಸಾವಧಾನದಿಂದ ನಿವಾರಿಸಿಕೊಳ್ಳಬೇಕಲ್ಲದೆ ಯಾರಿಂದ ಹಿಂಸೆಗೊಳಗಾದರೂ ಅಂತಹವರನ್ನು ಉದಾರವಾಗಿ ಕ್ಷಮಿಸುವ ಮತ್ತು ಸಹಿಸಿಕೊಳ್ಳುವ ವಿಶಾಲ ಹೃದಯಿಗಳಾಗಿರಬೇಕು. ತಾವರೆಯ ಎಲೆಯಂತೆ ಇದ್ದೂ ಇಲ್ಲದಂತಿರಬೇಕು. ಅಂದರೆ ತಾವರೆ ಇರುವುದು ನೀರಿನಲ್ಲೇ ಆದರೂ ಅದು ತೇಲುವುದು ತನ್ನ ಸ್ವತಂತ್ರ ಪ್ರವೃತ್ತಿಯಿಂದ ನೀರಿನೊಳಗಿದ್ದೂ ಅದಕ್ಕೆ ಅಂಟಿಕೊಳ್ಳದೆ ಹೇಗೆ ಸ್ವತಂತ್ರವಾಗಿರುತ್ತದೆಯೋ ಹಾಗೆಯೇ ಮುನಿಗಳೂ ಕೂಡ ಲೋಕದಲ್ಲಿದ್ದೂ ಅಲೌಕಿಕ ವ್ಯಾಪಾರಗಳಲ್ಲಿ ತೊಡಗಿಕೊಂಡಿರಬೇಕು. ಜಗತ್ತಿನೊಂದಿಗೆ ಸಹಜವಾಗಿಯೇ ನಿರ್ಲಿಪ್ತ ಭಾವನೆಯನ್ನು ಬೆಳೆಸಿಕೊಂಡಿರಬೇಕು.

ಸೂರ್ಯನು ಹೇಗೆ ಸದಾಕಾಲ ಪ್ರಕಾಶಿಸುತ್ತಾ ಜಗದಿರುವಿಕೆಗೆ ಸಾಕ್ಷಿಯಾಗಿ, ಅವುಗಳ ಜೀವದಾತನಾಗಿ, ಬಡವ-ಬಲ್ಲಿದರೆಂಬ ಭೇದವಿಲ್ಲದೆ ಸಮಾನವಾಗಿ ಬೆಳಕಿನ ಕಿರಣಗಳನ್ನು ಹರಡುತ್ತಾನೆಯೋ, ಹಾಗೆಯೇ ಮುನಿಗಳೂ ಕೂಡ ತಮ್ಮ

ತಪಸ್ಸಾಧನೆಯಿಂದ ಅಪೂರ್ವ ತೇಜೋವಂತರಾಗಿ, ತಮ್ಮ ಸಿದ್ಧಿ-ಸಾಧನೆಗಳ ಅನುಭವಗಳನ್ನು ಸಾಕ್ಷಾತ್ಕರಿಸಿಕೊಂಡ ತತ್ತ್ವವನ್ನು, ಅವರಿವರೆನ್ನದೆ ಜ್ಞಾನಪಿಪಾಸುಗಳಾಗಿ ಬರುವ ಎಲ್ಲರಿಗೂ ಉಪದೇಶಿಸಬೇಕು.

ಗಾಳಿ ಹೇಗೆ ಮನುಷ್ಯನಿಗೆ ಜೀವನಾಧಾರವೋ, ಮತ್ತು ಗಾಳಿಯಿಂದ ಸುತ್ತಣ ಪರಿಸರ ಹೇಗೆ ಸ್ವಚ್ಛವಾಗುತ್ತದೆಯೋ, ಹಾಗೆಯೇ ಶ್ರಮಣರೂ ಕೂಡ ಸಾಧನಾಸಕ್ತ ಜೀವರಿಗೆ ಮೋಕ್ಷಾಧಾರರೂಪದ ತತ್ತ್ವಗಳನ್ನು ನಿರ್ವಂಚನೆಯಿಂದ ಬೋಧಿಸಬೇಕು. ಅಷ್ಟಲ್ಲದೆ ಅವರು ಪಾಪಕಾರ್ಯೋನ್ಮುಖರಾಗುವುದನ್ನು ತಡೆದು ನಿವೃತ್ತಿಯ ಉಪಾಯಗಳಿಂದ ಸನ್ಮಾರ್ಗದತ್ತ ಅವರನ್ನು ಕೊಂಡೊಯ್ಯಬೇಕು.

ಇಂತಹ ವಶೇಷ ಗುಣಲಕ್ಷಣಗಳನ್ನು ಹೊಂದಿದವರು ಮತ್ತು ಸದಾಚಾರ ನಿಷ್ಠರು ಶ್ರಮಣರೆನಿಸಿಕೊಳ್ಳುತ್ತಾರೆ.

ಭಾಗವತದಲ್ಲಿ ಶ್ರಮಣರನ್ನು ಕುರಿತಾಗಿ ಹೀಗೆ ಉಲ್ಲೇಖಿಸಲಾಗಿದೆ :

ಸಂತುಷ್ಟಾಃ ಕರುಣಾ ಮಂತ್ರಾಃ ಶಾಂತಾದಾಂತಾಸ್ತಿತಿಷವಃ ।
ಆತ್ಮಾರಾಮಾಃ ಸಮದೃಶಃ ಪ್ರಾಯಶಃ ಶ್ರವಣಾ ಜಿನಾ ॥

(ಭಾಗವತ, ೧೨-೩-೧೯)

ಅಂದರೆ ಶ್ರಮಣರು ಸಂತುಷ್ಟರೂ, ಕರುಣೆಯುಳ್ಳವರೂ, ಸದಾ ಮೈತ್ರೀ ಭಾವನೆಯಿಂದ ಕೂಡಿರುವವರೂ, ಶಾಂತಚಿತ್ತರೂ, ಇಂದ್ರಿಯ ನಿಗ್ರಹವುಳ್ಳವರೂ, ಬಿಸಿಲು-ಚಳಿಯನ್ನು ಸಮಭಾವದಿಂದ ನೋಡುವವರೂ, ಆತ್ಮಧ್ಯಾನದಲ್ಲಿ ಸಂತೋಷದಿಂದಿರುವವರೂ, ಸಮದೃಷ್ಟಿಯುಳ್ಳವರೂ ಆಗಿರುತ್ತಾರೆಂದು ವರ್ಣಿಸಲಾಗಿದೆ.

ಇಂತಹ ಶ್ರಮಣರ ಆಚಾರ-ವಿಚಾರ, ನಡೆ-ನುಡಿ, ಅಶನ-ವಸನಾದಿಗಳನ್ನು ಒಳಗೊಂಡಿರುವುದೇ ಶ್ರಮಣ ಸಂಸ್ಕೃತಿ. ತುಂಬಾ ಕಠಿಣತರವಾದ ಆಚರಣೆಗಳನ್ನುಳ್ಳ ಈ ಸಂಸ್ಕೃತಿ ವೇದಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದುದು ಅದರ ಪ್ರಾಚೀನತೆಯನ್ನು ಸೂಚಿಸುತ್ತದೆ. ಅಲ್ಲದೆ ಸಿದ್ಧಶಿಲಾಮಾರ್ಗದ ಸಂಪಾದನೆಯಲ್ಲಿ ಇದರ ಮಹತ್ತ್ವವನ್ನು ಹೇಳುತ್ತದೆ.

ಓಂ ಣಮೋ ಅರಹಂತಾಣಂ, ಣಮೋ ಸಿದ್ಧಾಣಂ ।
ಣಮೋ ಆಇರಿಯಾಣಂ ಣಮೋ ಉವಜ್ಝಾಯಾಣಂ ।
ಣಮೋ ಲೋಏ ಸವ್ವಸಾಹೂಣಂ ॥

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೭. ಯಲ್ಲದಕೆರೆ ಪ್ರಾಚ್ಯಾವಶೇಷಗಳ ನವಶೋಧನೆ

-ಡಾ॥ ಮುತ್ತುರಾಜು*

ಯಲ್ಲದಕೆರೆ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಜವನಗೊಂಡನ ಹೋಬಳಿಯ ಒಂದು ಪ್ರಾಚೀನ ಪ್ರಮುಖಗ್ರಾಮ. ಹಿರಿಯೂರುವಿನಿಂದ ಹುಳಿಯಾರ್‌ಗೆ ಪ್ರಯಾಣಿಸುವ ಮಾರ್ಗ ಮಧ್ಯೆ ೧೮ ಕಿ.ಮೀ. ದೂರದಲ್ಲಿದೆ. ಮೂಲತಹ ರಸ್ತೆಯ ಎಡಭಾಗದಲ್ಲಿ ಬೆಳೆದುಬಂದಿದ್ದ ಗ್ರಾಮ ಕ್ರಮೇಣ ರಸ್ತೆಯ ಬಲಭಾಗಕ್ಕೆ ಸ್ಥಳಾಂತರವಾಗಿದೆ.

ಈ ಗ್ರಾಮಕ್ಕೆ ಸೇರಿರುವ ಕರೇಕೆಂಚಯ್ಯನ ಹಟ್ಟಿ ಎಂಬ ವಾಸ್ತವ್ಯದ ಚೆನ್ನಜ್ಜ ಎಂಬುವವರ ಹೊಲದಲ್ಲಿ ಪೂರ್ವಾಭಿಮುಖವಾಗಿ ನಿಲ್ಲಿಸಿದ್ದ ವೀರ-ಮಾಸ್ತಿಕಲ್ಲುವೊಂದು ಕಂಡುಬಂದಿದ್ದು ಅದು ಪ್ರಸ್ತುತ ಅಲ್ಲಿಯೇ ಬಿದ್ದುಹೋಗಿದೆ. ಇದು ೬.೬ ಅಡಿ ದಪ್ಪದಿಂದ ಕೂಡಿದೆ. ಸ್ಥಳೀಯ ಗಟ್ಟಿಕಲ್ಲುವಿನಿಂದ ಇದನ್ನು ನಿರ್ಮಿಸಲಾಗಿದೆ. ಈ ಸ್ಮಾರಕದ ಕೆಳಭಾಗದ ಬಲಗಡೆ ಸ್ವಲ್ಪ ಭಾಗ ಒಡೆದು ಹೋಗಿದ್ದು ನಾಲ್ಕುಹಂತಗಳ ಚಿತ್ರಣಗಳನ್ನು ಇದು ಒಳಗೊಂಡಿದೆ.

ಮೊದಲ ಹಂತದಲ್ಲಿ ಅಶ್ವವೊಂದರ ಮೇಲೆ ಕುಳಿತಿರುವ ಶತೃ ಒಬ್ಬನನ್ನು ಎದುರಗಡೆ ನಿಂತ ವೀರನೊಬ್ಬನು ತನ್ನ ವೀರತನದ ಭಂಗಿಯಲ್ಲಿ ಬಲಗೈನಲ್ಲಿ ಹಿಡಿದ ಖಡ್ಗ ಆಯುಧದಿಂದ ಎದರಿಸುತ್ತಿದ್ದಾನೆ. ಈತನ ಬೆನ್ನಿನ ಹಿಂಭಾಗದಲ್ಲಿ ವಿರುದ್ಧ ದಿಕ್ಕಿಗೆ ನಿಂತ ಈತನ ಗೆಳೆಯ ಅಥವಾ ಸಹೋದರನಾದ ಮತ್ತೊಬ್ಬ ವೀರನು ಮಂಡಿಕಾಲನ್ನು ಊರಿ ಬಲದಕೈನಲ್ಲಿ ಖಡ್ಗವಿಡಿದ ಮತ್ತು ಎಡದ ಕೈನಲ್ಲಿ ಡಾಲನ್ನು ಹಿಡಿದ ಶತ್ರುವನ್ನು ಖಡ್ಗದಿಂದ ಇರಿಯುತ್ತಿದ್ದಾನೆ. ಮೊದಲನೆ ಹಂತದ ಚಿತ್ರಣದ ಈ ಇಬ್ಬರು ವೀರರ ಚಿತ್ರಣಗಳು ಅತ್ಯಂತ ಎತ್ತರವಾಗಿರುವುದರಿಂದ ಇವರಿಬ್ಬರೂ ಶಾರೀರಿಕವಾಗಿ

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಕಾನ್ಹಿವಾಡ, ಸಿವನಿ ಜಿಲ್ಲೆ, ಮಧ್ಯಪ್ರದೇಶ-೪೮೦ ೯೯೦. ಮೊಬೈಲ್ : ೯೮೪೫೭೭೯೬೫೦.

ಎತ್ತರವಾಗಿದ್ದರು ಎಂದು ನಿರ್ಧರಿಸಬಹುದಾಗಿದೆ.

ಎರಡನೇ ಹಂತದ ಮಧ್ಯದಲ್ಲಿಯೂ ಇದೇ ಕಾಳಗದ ಮುಂದುವರೆದ ಚಿತ್ರಣವೇ ಇದ್ದು ಮತ್ತೊಬ್ಬ ವೀರನೊಬ್ಬನು ಶತೃವನ್ನು ತಲೆ ಕೆಳಗು ಮಾಡಿ ಕಾಲೊಂದನ್ನು ಹಿಡಿದೆತ್ತಿ ಭೂಮಿಗೆ ಚಚ್ಚುತ್ತಿದ್ದಾನೆ. ಇದನ್ನು ಗಮನಿಸಿದರೆ ಈತ ಶಾರೀರಿಕವಾಗಿ ಅತ್ಯಂತ ದಷ್ಟಪುಷ್ಟನಾಗಿದ್ದು ಶತೃವನ್ನು ಪುಡಿಪುಡಿ ಮಾಡಿದ್ದಾನೆ. ಅಂತಿಮವಾಗಿ ಮೂರು ಜನ ವೀರರು ಯಾವುದೋ ಮೋಸದ ತಂತ್ರಕ್ಕೆ ಬಲಿಯಾಗಿ ಹತರಾಗಿದ್ದಾರೆ. ಆದುದರಿಂದ ಮುಂದಿನ ಚಿತ್ರಣಗಳಲ್ಲಿ ಇವರು ಸತಿಯರ ಸಹಿತ ಕೈಲಾಸ ಸೇರಿರುವ ದೃಶ್ಯಾವಳಿಗಳಿವೆ. ಈ ಯುದ್ಧದ ಕಾರಣ ಯಾವುದು ಎಂಬುದು ತಿಳಿದುಬಂದಿಲ್ಲವಾದರೂ ಇದೊಂದು ರಾಜಕೀಯ ಜಗಳದ ಕಾರಣವೆಂದು ತಿಳಿಯಬಹುದಾಗಿದೆ. ಈ ಎರಡನೇ ಹಂತದ ಕಾಳಗದ ಇಕ್ಕೆಲಗಳಲ್ಲಿಯು ಮಡಿದ ವೀರರು ಸಹಗಮನ ಪದ್ಧತಿ ಅನುಸರಿಸಿ ಕೈಲಾಸಕ್ಕೂ ತಮ್ಮ ಪತಿಯರನ್ನು ಹಿಂಬಾಲಿಸಿರುವ ಇಬ್ಬರು ಪತ್ನಿಯರು ಸರ್ವಾಲಂಕಾರ ಭೂಷಿತೆಯರಾಗಿ ಎತ್ತಿದ ತಮ್ಮ ಬಲಗೈಗಳಿಂದ ನಿಂಬೆಹಣ್ಣುಗಳನ್ನು ಹಿಡಿದಿದ್ದಾರೆ, ಸ್ಥಳದ ಅಭಾವದಿಂದ ಇಲ್ಲಿ ಇಬ್ಬರು ವೀರರು ಮತ್ತು ಇಬ್ಬರು ಸತಿಯರ ಚಿತ್ರಣಗಳಿದ್ದರೂ ಮಡಿದವರು ಮೂರು ಜನವೀರರು ಮತ್ತು ಮೂವರು ಸತಿಯರು ಎಂಬುದಾಗಿ ಮುಂದಿನ ಹಂತವಾದ ಮೂರನೇ ಹಂತದಿಂದ ತಿಳಿಯಬಹದಾಗಿದೆ.

ಈ ಮೂರನೆಯ ಹಂತದಲ್ಲಿ ವೀರತನದಿಂದ ಶತೃಗಳನ್ನು ಎದುರಿಸಿ ಅವರಿಂದ ತಾವೂ ಹತರಾದ ಮೂವರು ವೀರರು ತಮ್ಮ ಸತಿಯರ ಜೊತೆ ಪದ್ಮಾಸನಗಳಲ್ಲಿ ಕೈಮುಗಿಯುತ್ತಾ ಕೈಲಾಸದಲ್ಲಿ ಕುಳಿತ ಚಿತ್ರಣಗಳಿವೆ. ನಾಲ್ಕನೇ ಹಂತದಲ್ಲಿ ಕೈಮುಗಿದು ಕುಳಿತ ಸತಿಯೋರ್ವಳ ಬಳಿಯಲ್ಲಿ ನಿಂತಿರುವ ಪತಿಯೊಬ್ಬನ ಚಿತ್ರಣವಿದೆ. ಈತನೂ ಕೈಮುಗಿಯುತ್ತಿದ್ದಾನೆ. ಇವರು ಉತ್ತಮ ಸ್ಥಾನವನ್ನು ಹೊಂದಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಇವರ ಮುಂದೆ ಸ್ತ್ರೀಗಣವೊಂದು ಶಿವಲಿಂಗಕ್ಕೆ ಜಲಾಭಿಷೇಕ ಮಾಡುತ್ತಿದ್ದರೆ, ಎದುರಿಗೆ ನಿಂತಿರುವ ಪುರುಷ ಶಿವಗುಣ ತನ್ನ ಬಲದ ಕೈನಲ್ಲಿ ಆರತಿ ತಟ್ಟೆ ಹಿಡಿದು ಎಡದಕೈನಲ್ಲಿ ಗಂಟೆ ಹಿಡಿದು ಪೂಜಿಸುತ್ತಿರುವ ಚಿತ್ರಣವಿದೆ. ಮೇಲೆ ಎರಡೂ ಬದಿಗಳಲ್ಲಿ ಚಂದ್ರಸೂರ್ಯರ ಕೆತ್ತನೆಗಳಿವೆ.

ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಸೇರುವ ಈ ವೀರ-ಮಾಸ್ತಿ ಸ್ಮಾರಕವು ಇಲ್ಲಿ ಘಟಿಸಿದ ವೀರ ಮತ್ತು ತ್ಯಾಗಬಲಿದಾನದ ವಿಷಯವನ್ನು ವ್ಯಕ್ತಪಡಿಸುತ್ತಿದೆ.

ಈ ವೀರ-ಮಾಸ್ತಿ ಸ್ಮಾರಕದ ಎಡಭಾಗದಲ್ಲಿ ಒಂದೂವರೆ ಅಡಿ ಎತ್ತರ ಮತ್ತು ಒಂದು ಕಾಲು ಅಡಿ ಅಗಲದ ಕಣಶಿಲೆಯ ವೀರಗಲ್ಲು ಸ್ಮಾರಕವೊಂದು ಇದ್ದು ಇದು ಭೂಮಿಯಲ್ಲಿ ಹೂಳಲ್ಪಟ್ಟು ನಿಂತಿದೆ. ಈ ವೀರಗಲ್ಲುಪಿನಲ್ಲಿ ಅಶ್ವದ ಮೇಲೆ ಕುಳಿತು

ತನ್ನ ಬಲಗೈನಲ್ಲಿ ಉದ್ದನೆಯ ಈಟಿ ಹಿಡಿದು ಯುದ್ಧದಲ್ಲಿ ನಿರತನಾಗಿರುವ ವೀರನೊಬ್ಬನ ಚಿತ್ರಣವಿದೆ. ಈ ವೀರಗಲ್ಲು ಸ್ಮಾರಕದಲ್ಲಿ ಯುದ್ಧದ ಹೆಚ್ಚಿನ ವಿವರಗಳು ಚಿತ್ರಿತವಾಗಿಲ್ಲ. ಆದರೂ ಇಲ್ಲಿನ ವೀರನು ಯಾವುದೋ ಕಾರಣದಿಂದ ಶತೃಗಳ ಮೇಲೆ ಯುದ್ಧಮಾಡಿ ಮರಣಹೊಂದಿದ್ದಾನೆ. ವೇಗವಾಗಿ ಚಲಿಸುತ್ತಿರುವ ಅಶ್ವದ ಮೇಲೆ ಕುಳಿತ ವೀರನು ತನ್ನ ಬಲದ ಕೈನಿಂದ ಖಡ್ಗವನ್ನು ಬೀಸುತ್ತಿದ್ದಾನೆ. ಈ ವೀರಗಲ್ಲಿನ ಕಾಲಮಾನ ಕ್ರಿ.ಶ. ಸುಮಾರು ೧೬ನೇ ಶತಮಾನವಾಗಿದೆ.

ಈ ಯಲ್ಲದಕೆರೆಯ ಸಿದ್ಧಪ್ಪನಹೊಂಡ ಎಂಬ ಸ್ಥಳದಲ್ಲಿ ಪ್ರಾಚೀನವಾದ ನೈಸರ್ಗಿಕ ಹೊಂಡವೊಂದು ಇದೆ. ಪ್ರಾಯಶಃ ನೈಸರ್ಗಿಕವಾದ ಈ ಜಲಸೂಚಕ ಸ್ಥಳವನ್ನು ಸ್ಥಳೀಯರು ಕೆರೆ ಎಂದು ಕರೆದಿದ್ದು ಯಲ್ಲದಕೆರೆ ಎಂಬ ಹೆಸರು ಬಂದಿದೆ. ಪ್ರಸ್ತುತ ಇಲ್ಲಿನ ಹೊಂಡವನ್ನು ಸಿದ್ಧಪ್ಪನಹೊಂಡ ಅಂದರೆ, ಸಿದ್ದೇಶ್ವರನ ಹೊಂಡ ಎಂಬ ಶೈವದೈವದ ಹೆಸರಿನಿಂದ ಕರೆಯುತ್ತಿದ್ದಾರೆ, ಕಾರಣ ಇಲ್ಲಿರುವ ಸಿದ್ಧೇಶ್ವರ ಎಂಬ ದೈವದ ಗುಡಿ. ಈ ಹೊಂಡಕ್ಕೆ ಪ್ರಾಚೀನವಾದ ಕಲ್ಲುಚಪ್ಪಡಿಗಳ ಸೋಪಾನಗಳನ್ನು ನಿರ್ಮಿಸಿದ್ದು ಈಗ ಅವುಗಳನ್ನೆಲ್ಲಾ ತೆಗೆದುಹಾಕಿ ನವೀಕರಿಸಲಾಗುತ್ತಿದೆ. ಈ ಹೊಂಡದ ಬಲದಡದಲ್ಲಿ ಸಿದ್ಧಪ್ಪ ಅಥವಾ ಸಿದ್ಧೇಶ್ವರ ಎಂಬ ನಂದಿ ಮೂರ್ತಿ ಇರುವ ಕಲ್ಲು ಮತ್ತು ಗಾರೆಗಳಿಂದ ನಿರ್ಮಿಸಿರುವ ಪುಟ್ಟಗುಡಿ ಇದೆ. ಈ ನಂದಿ ವಿಗ್ರಹದ ಎಡ ಬದಿಯಲ್ಲಿ ಕಬ್ಬಿಣದ ದೊಡ್ಡ ಖಡ್ಗವೊಂದನ್ನು ನಿಲ್ಲಿಸಲಾಗಿದೆ. ಮುಂದುಗಡೆ ಗಣಪತಿಯ ಪುಟ್ಟ ಕಲ್ಲುವಿಗ್ರಹ ಮತ್ತು ಆರು ಪುಟ್ಟನಂದಿಯ ಮೂರ್ತಿಗಳಿವೆ. ವ್ಯವಸಾಯ ಸೂಚಕವೂ, ಪರಶಿವನ ವಾಹನವೂ ಆದ ನಂದಿ ಇಲ್ಲಿನ ಜನತೆಯ ಧಾರ್ಮಿಕತೆಯಲ್ಲಿ ಪ್ರಧಾನಪಾತ್ರ ವಹಿಸಿದೆ.

ಬಳಿಯಲ್ಲಿ ಈ ಹೊಂಡಕ್ಕೆ ಹೊಂದಿಕೊಂಡಂತೆ ನೂರಾ ಒಂದು ಲಿಂಗಗಳು ಎಂಬ ಪುಟ್ಟ ಪುಟ್ಟ ಕಲ್ಲಿನ ಶಿವಲಿಂಗಗಳಿದ್ದು ಮಧ್ಯದಲ್ಲಿ ಒಂದು ಪ್ರಧಾನವಾದ ಶಿವಲಿಂಗವಿದೆ. ಜೊತೆಗೆ ಎರಡು ಗಣಪತಿಯ ಶಿಲಾಮೂರ್ತಿಗಳು, ಅಲ್ಲದೇ ಇಕ್ಕೆಲಗಳಲ್ಲೂ ಎರಡು ನಂದಿಯ ಮೂರ್ತಿಗಳಿವೆ. ಬಹಳಷ್ಟು ಸವೆದುಹೋಗಿರುವ ಈ ನಂದಿಮೂರ್ತಿಗಳನ್ನು ಗಮನಿಸಿದರೆ ಇವುಗಳು ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನದಲ್ಲಿ ಸ್ಥಾಪಿತವಾಗಿವೆ ಎಂದು ನಿರ್ಧರಿಸಬಹುದು. ಮಳೆಬಂದು ಹೊಂಡ ತುಂಬಿದಾಗ ಈ ಶಿವಲಿಂಗ ಮತ್ತು ಇತರ ಮೂರ್ತಿಗಳು ನೀರಿನಲ್ಲಿ ಮುಳುಗಿಹೋಗಿರುತ್ತವೆ. ಇವುಗಳಿಗೆ ಒಂದು ಪುಟ್ಟ ಗುಡಿಯನ್ನು ನಿರ್ಮಿಸಲಾಗಿದೆ. ಹೊಂಡದ ಎಡಭಾಗದಲ್ಲಿ ೩ ಅಡಿ ಎತ್ತರ ಮತ್ತು ೨ ಅಡಿ ಅಗಲದ ಆಂಜನೇಯನ ಪ್ರತಿಮೆ ಇದ್ದು ಇದನ್ನೂ ಗ್ರಾಮೀಣ ಭಕ್ತರು ಪೂಜಿಸುತ್ತಾರೆ. ಮತ್ತೊಂದು ಒಂದೂವರೆ

ಅಡಿ ಎತ್ತರದ ಆಂಜನೇಯನ ಮೂರ್ತಿಯನ್ನು ಇಲ್ಲಿಂದ ತೆಗೆದುಕೊಂಡು ಹೋಗಿ ಊರಿನ ಮಧ್ಯದಲ್ಲಿ ಪುಟ್ಟ ಗುಡಿ ನಿರ್ಮಿಸಿ ಪೂಜಿಸುತ್ತಿರುವುದರಿಂದ ಇಲ್ಲಿನ ಜನತೆಯಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಸಮನ್ವಯತೆ ಹೆಚ್ಚಿಗೆ ಇದ್ದಿರುವ ಸಂಗತಿಯನ್ನು ಮನಗಾಣಬಹುದು.

ಹೊಂಡದ ಬಲಭಾಗದ ದಂಡೆಯ ಮೇಲೆ ಕಲ್ಲುಪಟ್ಟಿಕೆಯ ಮಧ್ಯಭಾಗದಲ್ಲಿ ಮಹಾಸತಿಯ ಶಿಲ್ಪವೊಂದು ಇದೆ. ಸತಿಸಹಗಮನ ಪದ್ಧತಿ ಅನುಕರಿಸಿರುವ ಮಹಿಳೆಯೋರ್ವಳು ತನ್ನ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ಹಿಡಿದಿದ್ದು ಬಲದ ಕೈನಲ್ಲಿ ನಿಂಬೆಹಣ್ಣು ಮತ್ತು ಎಡದ ಕೈನಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಉತ್ತಮ ವಸ್ತ್ರಪೋಷಾಕು ಮತ್ತು ಆಭರಣಗಳನ್ನು ಧರಿಸಿರುವ ಈಕೆಯ ಶಿರದ ಎರಡೂ ಕಡೆ ಚಂದ್ರಸೂರ್ಯರ ಕೆತ್ತನೆಗಳಿವೆ. ಈಕೆಯ ಬಲಭಾಗದ ಕೆಳಗಡೆ ಶಿವಲಿಂಗದ ಚಿತ್ರಣವಿದೆ. ಪತಿಯ ಅಕಾಲಿಕ ಮರಣದ ಕಾರಣವಾಗಿ ಈಕೆ ಅಂದಿನ ಪದ್ಧತಿಯಂತೆ ಸತಿಸಹಗಮನ ಪದ್ಧತಿ ಅನುಸರಿಸಿದ್ದು ಕೈಲಾವಾಸಿಯಾಗಿದ್ದಾಳೆ. ಈ ಮಾಸ್ತಿ ಶಿಲ್ಪದ ಕಾಲಮಾನವು ಕ್ರಿ.ಶ. ಸುಮಾರು ೧೪ನೇ ಶತಮಾನದ್ದಾಗಿದೆ.

ಈ ಮಹಾಸತಿ ಶಿಲ್ಪದ ಬಳಿಯಲ್ಲಿ ಒಂದು ಬಳಪದ ಕಲ್ಲಿನಂತಹ ಶಿಲಾತುಂಡೊಂದು ಬಿದ್ದಿದ್ದು ಭಕ್ತರು ಇದರಿಂದ ಕುಳಿಗಳ್ನು ಮೂಡಿಸಿ ವಿಭೂತಿಯನ್ನು ಪಡೆದುಕೊಂಡು ಹಣೆಗೆ ಹಚ್ಚಿಕೊಳ್ಳುತ್ತಾರೆ. ಇದರಲ್ಲಿ ವಿಭೂತಿಗಾಗಿ ಮೂಡಿಸಿರುವ ಸಂಖ್ಯೆ ೩೦ನ್ನು ಮೀರಿವೆ. ಇಲ್ಲಿಯೇ ಏಳು ನಾಗಶಿಲ್ಪಗಳ ವಿಗ್ರಹಗಳಿವೆ. ಯಲ್ಲದಕೆರೆ ಗ್ರಾಮವು ಪೂರ್ಣ ಪ್ರವರ್ಧಮಾನವಾಗಿ ಬೆಳೆದಬಂದ ವೇಳೆಯಿಂದಲೂ ಇಲ್ಲಿ ಪೂಜಾ ಕೈಂಕರ್ಯಗಳು ನಿರಂತರವಾಗಿ ನಡೆದುಕೊಂಡು ಬರುತ್ತಿದ್ದು ಪ್ರತಿ ಸೋಮವಾರ ವಿಶೇಷ ಪೂಜೆ ಮತ್ತು ಸಾಮೂಹಿಕ ಭೋಜನ ವ್ಯವಸ್ಥೆ ಇರುತ್ತದೆ. ಈ ಹೊಂಡದ ಹಿಂದೆ ಭೂತಪ್ಪ ಎಂಬ ದೈವವೊಂದರ ಗುಡಿಯೊಂದಿದ್ದು, ಮೊದಲಿನಿಂದಲೂ ರಾಶಿಹಾಕಲ್ಪಟ್ಟ ತುಂಡುಕಲ್ಲುಗಳ ಮಧ್ಯದಲ್ಲಿ ಭೂತಪ್ಪ ದೇವರ ಕಲ್ಲುಮೂರ್ತಿಯನ್ನು ಇಟ್ಟು ಪೂಜಿಸಲಾಗುತ್ತಿದೆ. ಕ್ರಿ.ಶ. ೧೯೭೭ ರಲ್ಲಿ ಇದಕ್ಕೆ ಕಲ್ಲು ಮತ್ತು ಮಣ್ಣಿನ ಸಹಾಯದಿಂದ ಪುಟ್ಟ ಕಟ್ಟಡವೊಂದನ್ನು ನಿರ್ಮಿಸಲಾಗಿದೆ. ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಊರ ಜಾತ್ರೆಯ ವೇಳೆಯಲ್ಲಿ ಸಿದ್ಧಪ್ಪ ಮತ್ತು ಭೂತಪ್ಪರಿಗೆ ವಿಶೇಷ ಪೂಜೆ ಪುನಸ್ಕಾರಗಳು ಜರಗುತ್ತವೆ. ಈ ವೇಳೆಯಲ್ಲಿ ಇಲ್ಲಿನ ಸರ್ಕಾರಿ ಆಸ್ಪತ್ರೆ ಬಳಿ ಇರುವ ಕರೆಕಲ್ಲು ಎಂಬ ಲಿಂಗಮುದ್ರೆ ಕಲ್ಲಿನವರೆಗೂ ಉತ್ಸವ ಮೂರ್ತಿಯನ್ನು ಮೆರವಣಿಗೆ ಸಹಿತ ತಂದು ಪೂಜೆ ಮಾಡಲಾಗುತ್ತದೆ.

ಇಲ್ಲಿನ ಮುಖ್ಯರಸ್ತೆಯ ಬಲಭಾಗದಲ್ಲಿನ ತಗ್ಗು ಪ್ರದೇಶದಲ್ಲಿ ಪುಟ್ಟ ಕಲ್ಲು ಮಣ್ಣುಗಳ

ಗುಡಿಯೊಂದನ್ನು ಸ್ಥಾಪಿಸಲಾಗಿದ್ದು ಈಗ ಪಾಳುಬಿದ್ದಿದ್ದು ಶಿವಲಿಂಗದ ಪೀಠವು ಮಾತ್ರ ಗುಡಿಯ ಕಟ್ಟಡದ ಮೇಲೆ ಬಿದ್ದಿದೆ. ಇದರಿಂದ ಇದೊಂದು ಶೈಗುಡಿ ಆಗಿದ್ದಿತೆಂದು ನಿರ್ಧರಿಸಬಹುದಾಗಿದೆ.

ಕ್ರಿ.ಶ. ಸುಮಾರು ೧೯ನೇ ಶತಮಾನದವರೆಗೂ ಇದೇ ಪರಿಸರದಲ್ಲಿದ್ದ ಯಲ್ಲದಕೆರೆ ಗ್ರಾಮವು ರೋಗ ಪಿಡುಗುವೊಂದು ಹರಡಿದ್ದರಿಂದ ರಸ್ತೆಯ ಎದುರು ಬದಿಗೆ ಸ್ಥಳಾಂತರವಾಗಿದೆ. ಬಳಿಯಲ್ಲಿಯೇ ಕ್ರಿ.ಶ.ಸು. ೧೯೫೫ ರಲ್ಲಿ ನವೀಕರಿಸಿರುವ ದುರ್ಗಾದೇವತೆಯ ಗುಡಿಯೊಂದು ಇದ್ದು ಗರ್ಭಗುಡಿಯಲ್ಲಿ ಪುಟ್ಟ ಪ್ರಮಾಣದ ಚತುರ್ಭುಜೆ ದುರ್ಗೆ ಸಿಂಹದ ಮೇಲೆ ಕುಳಿತು ಮಹೀಷನನ್ನು ಸಂಹರಿಸುತ್ತಿರುವ ಮೂರ್ತಿ ಇದೆ. ಇದನ್ನು ಸ್ಥಳೀಯವಾಗಿ ಕರಿಯಮ್ಮ ಎಂದು ಕರೆಯಲಾಗುತ್ತಿದೆ. ಮಂಗಳವಾರ ಮತ್ತು ಶುಕ್ರವಾರ ವಿಶೇಷ ಪೂಜೆ ಮಾಡುವುದಕ್ಕಾಗಿ ಅಪಾರ ಭಕ್ತ ಸಂಖ್ಯೆ ಆಗಮಿಸುತ್ತದೆ. ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಜಾತ್ರೆಯ ವೇಳೆಯಲ್ಲಿ ರಥೋತ್ಸವವು ಆಯೋಜಿಸಲ್ಪಟ್ಟು ಊರು ಮತ್ತು ಮುಖ್ಯರಸ್ತೆಯಲ್ಲಿ ಉತ್ಸವವನ್ನು ನಡೆಸಲಾಗುತ್ತದೆ.

ವೈಷ್ಣವ, ಶೈವ ಮತ್ತು ಶಾಕ್ತದೇವತೆಗಳ ಆರಾಧನೆಯ ಗ್ರಾಮವಾದ ಯಲ್ಲದಕೆರೆಯು ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಗ್ರಾಮಗಳ ಸ್ಥಳವಾದ ಸೋಮೇರಹಳ್ಳಿ, ಗೌಡನಹಳ್ಳಿ, ಪರಮೇನಹಳ್ಳಿ, ಉಡುವಳ್ಳಿ, ಇದ್ದಲನಾಗೇನಹಳ್ಳಿ ವಡ್ಡರಹಟ್ಟಿ ಇಂಡಸ ಕಟ್ಟೆಗಳ ಜೊತೆಗೆ ನಿಕಟ ಬಾಂಧವ್ಯವನ್ನು ಹೊಂದಿದ್ದು ಪ್ರಾಗೈತಿಹಾಸಿಕ ಕಾಲವಾದ ನವಶಿಲಾಯುಗದಿಂದ ಇಂದಿನವರೆಗೆ (ಕಾಲ ಕ್ರಿ.ಪೂ.ಸು ೩,೦೦೦) ಸತತವಾಗಿ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿದ್ದು ಚಿತ್ರದುರ್ಗ ಜಿಲ್ಲೆಯ ಇತಿಹಾಸದಲ್ಲಿ ಸಕ್ರಿಯಪಾತ್ರ ವಹಿಸಿದೆ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ–ಜೂನ್, ೨೦೧೩

# ಲ. ಜಿ. ಅಬ್ದುಲ್ ಬಷೀರ್ ಅವರ 'ತಾಯಿ' ಕವಿತೆ

–ಡಾ॥ ದೊಡ್ಡರಂಗೇಗೌಡ*

ಹೊತ್ತು
ಹೆತ್ತು ಹೊತ್ತು
ಸಾಕಿ ಸಲಹಿದ ಸಾಮ್ರಾಜ್ಞಿ
ನೆಲ–ನೀರು–ಆಕಾಶ
ಮರ–ಗಿಡ–ಬಳ್ಳಿ–ಗಾಳಿ
ಚಂದ್ರ–ನಕ್ಷತ್ರ–ಸೂರ್ಯಾದಿಗಳ ಸಾರ–
ಫಲವತ್ತ ಹಿಂಡಿ ನನಗುಣಬಡಿಸಿದವಳು–
ನನ್ನ ತಾಯಿ.
'ಉಪ್ಪಿಗಿಂತ ರುಚಿಯಿಲ್ಲ
ತಾಯಿಗಿಂತ ಬಂಧುವಿಲ್ಲ !'
ಅಪ್ಪನಗ್ನಿಯಾಕ್ರೋಶವನ್ನು
ಥಂಡಿ ಮಾಡಿದವಳು.

ಅವ್ವ ಉಂಡದ್ದು ಅಷ್ಟಕಷ್ಟೆ !
ಹೊಟ್ಟೆ ಬಟ್ಟೆ ಕಟ್ಟಿದವಳು
ತಾ ಗಂಜಿಯುಂಡು ನನಗೆ–
ಪರಮಾನ್ನವನ್ನೆ ಉಣಿಸಿದವಳು !
ತಾರೆಂದು ಬಾರೆಂದು ಗೋಗರೆದರೆ
ತನ್ನಡಿಯಲ್ಲಿ ಅಪ್ಪುವವಳು
ಅವ್ವ ಮರ ಗಿಡಗಳ ಬೇರಿಗೆ
ಜಾಗವಾಗುವಳು, ಥಳಿಸಿಕೊಂಡು
ತುಳಿಸಿಕೊಳ್ಳುವಳು–
ತೆಂಗು ಗರಿಗಳ ಮೇಲೆ ವಿಹಂಗಗಳ
ಉಲಿಗೆ ಕಾರಣವಾದವಳು
'ಜೀವಾಣುಜಾಲಗಳ ನಲಿವಿಗೆ ಮೂಲವಾದವಳು;

* 'ಶ್ರೀಸನ್ನಿಧಿ' ೧೪೦. ೩ನೇ ಮುಖ್ಯರಸ್ತೆ. ೪ನೇ ಫೇಸ್. ಬನಶಂಕರಿ ೩ನೇ ಘಟ್ಟ. ಕತ್ರಿಗುಪ್ಪೆ ಪೂರ್ವ. ಬೆಂಗಳೂರು–೫೬೦ ೦೮೫. ಮೊಬೈಲ್ : ೯೩೪೨೫೮೨೩೮೬

ಕಣ್ಣೀರ
ಕಣ ಕಣವ ಸುರಿಸಿದವಳು
ರೆಪ್ಪೆಯುಡಿಯಲ್ಲವಳ ಗೌರವಿಸುವೆ !

ಕವಿಯ ಕಾವ್ಯ ಭಾವಕೋಶದ ಅನುಭವದ ಅನುರಣನ; ಕವಿತೆ ಯಾವತ್ತೂ ಕವಿಯ ಜೀವನಾನುಭವದ ಭಾವ ಸರಿತೆ; ಸಮರ್ಥ ವಾಗರ್ಥಗಳ ಮೂಲಕ ಅಭಿವ್ಯಕ್ತಿ. ಅನನ್ಯವಾಗಿ ಸಮರಸದ ನುಡಿಎರಕ ಸಾಧಿತವಾದಾಗ 'ಧ್ವನಿ'ಯೂ ಅಲ್ಲಿ ಪರಿಪ್ಲುತ; ಆಗ ಕವಿತೆ ಜೀವಂತ.

'ತಾಯಿ'ಯನ್ನು ಕುರಿತು ಬರೆಯದ ಕವಿಯಿಲ್ಲ; ಸ್ಮರಿಸದ ಮನುಜನಿಲ್ಲ. ತಾಯಿಯ ಹಿರಿಮೆ ಎನಿತೆನಿತು ಬಣ್ಣಿಸಿದರೂ ಮುಗಿಯದ ಅಕ್ಷಯ ಭಾವ ಚಿಲುಮೆ. ಆ ಮಾತೃ ವಾತ್ಸಲ್ಯದ ಮುಂದೆ ಎಂಥೆಂಥ ವೈಚಾರಿಕರೂ ಹೃತ್ಪೂರ್ವಕ ಶರಣು.

ಕವಿ ಶ್ರೀ ಜಿ. ಅಬ್ದುಲ್ ಬಷೀರ್ ಅವರು ಇಂಥ ಚಿರಪರಿಚಿತ ವಸ್ತುವನ್ನು ತಮ್ಮ 'ತಾಯಿ' ಕವಿತೆಯಲ್ಲಿ ತಮ್ಮ ಜೀವನಾನುಭವಗಳ ಹಿನ್ನೆಲೆಯಲ್ಲಿ ಅಭಿವ್ಯಕ್ತಿಸಲು ಹವಣಿಸಿದ್ದಾರೆ.

ಕವಿತೆಗೆ ಓದಿಸಿಕೊಳ್ಳುವ ಗುಣವಿದೆ; ಇದು ಇತ್ಯಾತ್ಮಕ ಅಂಶ; ಇಲ್ಲಿನ ಲಲಿತ ಶೈಲಿ ಮೆಚ್ಚುವಂಥಾದ್ದು. ಮೊದಲ ಘಟ್ಟದಲ್ಲಿ ಕವಿ ತನ್ನ ತಾಯಿಯ ನುಡಿ ಚಿತ್ರವನ್ನು ಸುಸೂತ್ರವಾಗಿ ಮೂಡಿಸಿದ್ದಾರೆ. ಅಲ್ಲಿ ಎಲ್ಲ ಅಮ್ಮಂದಿರೂ ಇದ್ದಾರೆ ! ಸಹಜ ಭಾವಗಳಿಗೆ ಸೂಕ್ಷ್ಮ ಅನುಭವಗಳ ಎರಕ ಇಲ್ಲಿ ಪ್ರಾಪ್ತವಾಗಿದೆ. 'ಹೆತ್ತು ಹೊತ್ತು ಸಾಕಿ ಸಲಹಿದ ಸಾಮ್ರಜ್ಞೆ' ಇಲ್ಲಿ ಬಷೀರ್ ವೈಭವೀಕರಣಕ್ಕೆ ಮೊರೆ ಹೋಗಿದ್ದಾರೆ. ವರ್ಣಕ ಶೈಲಿಯ ಬೇರುಗಳು ಇಂಥ ಕಡೆ ಸುಭದ್ರ. ತಾಯಿ, ಮಗುವಿನ ದೃಷ್ಟಿಯಿಂದ–ಅನನ್ಯ; ಅನುಪಮ; ಅಪೂರ್ವ. ಆ ವಾತ್ಸಲ್ಯ ಸಮುದ್ರವನ್ನು ಎನಿತೆನಿತು ಇಲ್ಲಿ ಬಣ್ಣಿಸಿದರೂ ಕವಿಗೆ ತೃಪ್ತಿ ಇಲ್ಲ. ವಾಸ್ತವ ಜಗದ ಬಹುಮುಖಿ ಅನುಭವ ಕವಿಗೆ ಆಗಿದ್ದೇ ತಮ್ಮ ಬಾಲ್ಯದಲ್ಲಿ ತಾಯಿಯ ಮೂಲಕ. ಆಕೆ ಕವಿಗೆ ಮೊದಲ 'ಗುರು' ಕೂಡ !

ಇಡೀ ಬ್ರಹ್ಮಾಂಡದ ಅಸೀಮ ಅನುಭವಗಳು ಮಗುವಿಗೆ ಎಟುಕುವುದೇ ತಾಯಿಯ ನಿರ್ದೇಶನದ ಮುಖಾಂತರ. ಆಕೆಯೇ ಇಲ್ಲಿ ಕವಿಗೂ ನಿಜದಾರಿ ದೀಪ. ನೆಲ ಮುಗಿಲ ಎಲ್ಲ ಅನುಭವ ಸಾರ ಉಣಬಡಿಸಿದವಳು ಅವಳು. ಅಂಥ ಅಕ್ಕರೆಯ ತಾಯಿಯ ಬಗೆಗೆ ಈ ಕವಿತೆಯಲ್ಲಿ ಅನುಪಮ ರೀತಿಯ ಗೌರವಭಾವೂ ಇರುವುದರಿಂದಲೇ ಪ್ರತಿಪಾದವೂ ಇಲ್ಲಿ ಆಕೆಯ ಬಗೆಗೆ ಮುಕ್ತ ಮೆಚ್ಚುಗೆ.....ನುಡಿ ಹಂದರವಾಗಿ ಭಾವೋದ್ದೀಪಿತ ಹೆಣಿಗೆಯಾಗಿ ಅರ್ಥ ಪರಿಧಿಯನ್ನು ವಿಸ್ತರಿಸಿಕೊಳ್ಳಲು ಸಶಕ್ತವಾಗಿದೆ.

ಆಕೆಯ ತ್ಯಾಗ ಇರುವುದು ತಾನುಪವಾಸವಿದ್ದೂ ಮಗುವನ್ನು ಬೆಳೆಸುವ

ನಿಷ್ಠೆಯಲ್ಲಿ.... 'ತಾ ಗಂಜಿಯುಂಡರೂ' ಮಗುವಿಗೆ 'ಪರಮಾನ್ನವನ್ನೇ ಉಣಿಸಿದವಳು'. ಇಲ್ಲಿಯ ಪ್ರತಿ ಪದಪ್ರಯೋಗವೂ ಸಂದರ್ಭೋಚಿತ.

ಈ ತಾಯಿ ಕೇವಲ ತನ್ನ ಹೆತ್ತ ತಾಯಿಯಷ್ಟೇ ಅಲ್ಲ....ತಾಯಿ 'ಪೃಥ್ವಿ' ಕೂಡ.... ಮರ ಗಿಡಗಳ ಬೇರಿಗೆ ಮೂಲವಾದವಳು ಈ ತಾಯಿ ಎಂಬಲ್ಲಿ ಈ ಕವಿತೆಯ ವ್ಯಾಪ್ತಿ ಹಿಗ್ಗುವುದನ್ನು ನಾವು ಕಾಣಬಹುದು......ಸಹೃದಯರಿಗೆ ಸಂತೋಷವಾಗುವುದೇ ಇಂಥ ಕಡೆ.

ಭೂಮಿ ತಾಯಿಯ ಪ್ರಸ್ತಾಪವೂ ಈ ಕವಿತೆಯ ಕೊನೆಯ ಘಟ್ಟದಲ್ಲಿ ಮಾರ್ಮಿಕವಾಗಿ ಸಮರ್ಥ ಪದಪುಂಜಗಳಲ್ಲಿ ಮೈತಳೆದಿರುವುದರಿಂದ ಕವಿಯ ಕವಿತೆಯ ಆವಿಷ್ಕಾರದಲ್ಲಿ ಅಗಣಿತ ಅನುಭವಗಳಿಗೆ ಅಖಂಡ ಆಕಾರ ನೀಡುವ ಪ್ರಯತ್ನದಲ್ಲಿದೆ.

ಜಗದ ಅಸ್ತಿತ್ವಕ್ಕೆ ಈ 'ಪೃಥ್ವಿ' ಕಾರಣ; ಕವಿಯ ಅಸ್ತಿತ್ವಕ್ಕೆ ಈ 'ತಾಯಿ' ಕಾರಣ. ತನ್ನ ಮಾತೆಗೆ ವಂದಿಸುವಲ್ಲಿ ಪರೋಕ್ಷವಾಗಿ ಕವಿ 'ಜಗನ್ಮಾತೆ'ಗೂ ವಂದಿಸಿದ್ದಾರೆ.

'ಜೀವ ಜೀವಾಣುಗಳ ನಲಿವಿಗೆ ಮೂಲ'ವಾದ ಈ ಮಾತೆಯ ಬಗೆಗೆ ಅನನ್ಯ ಗೌರವ; ಆ ಋಣ ಎಷ್ಟು ಜೀವತೆಯ್ದರೂ ನಿಜಕ್ಕೂ ಋಣಭಾರ ತೀರಿಸಲಾರದಂಥದ್ದು. ಅದನ್ನು ಬಷೀರ್ ಅವರು ಮನ ಮುಟ್ಟುವಂತೆ ಅಭಿವ್ಯಕ್ತಿಸಿದ್ದಾರೆ. ಅಂಥ ಹಿರಿಮೆಯ ಆ ಮಹಾತಾಯಿಗೆ ಕವಿ 'ರೆಪ್ಪೆಯುಡಿಯಲ್ಲವಳ ಗೌರವಿಸುವೆ' ಎಂಬ ಕೃತಜ್ಞತೆ ಅರ್ಪಿಸುವಲ್ಲಿ ಕವಿತೆಯ ಅಂತ್ಯ ಸೂಕ್ತ ಮುಕ್ತಾಯವನ್ನು ಕಾಣುತ್ತದೆ.

ಕನ್ನಡ ಪ್ರಖ್ಯಾತ ಕವಿ ಶ್ರೀ ಸು. ರುದ್ರಮೂರ್ತಿಶಾಸ್ತ್ರಿಯವರು ಈ ಕವಿತೆಯ ಬಗ್ಗೆ ಹೇಳಿರುವ ಮಾತುಗಳು ಉಲ್ಲೇಖನೀಯ : 'ತನ್ನ ತಾಯಿಯ ವೈಯಕ್ತಿಕ ಸಂಬಂಧದ ಮೂಲಕ ಆರಂಭವಾದ ಈ ಕವಿತೆ' ವ್ಯಾಪಕ ವ್ಯಕ್ತಿತ್ವವನ್ನು ಧ್ವನಿಪೂರ್ಣವಾಗಿ ವ್ಯಕ್ತಪಡಿಸುತ್ತದೆ. ಇದೇ ವಸ್ತುವನ್ನು ಹೊಂದಿದ ಶ್ರೀ ಪಿ. ಲಂಕೇಶ್ ಅವರ 'ಅವ್ವ' ಕವಿತೆಯ ಪ್ರಭಾವವೂ ಕವಿತೆಯ ಮೇಲಾಗಿದೆ ಎಂಬುದು ಗಮನಾರ್ಹ.

'ತಾಯಿ' ತಾಜಾ ಅನುಭವದಿಂದ ಕೂಡಿದ ಧ್ವನಿ ಪೂರ್ಣ ಕವನ. ಹೆತ್ತು-ಹೊತ್ತು, ಸಾಕಿ ಸಲಹಿದ ಕರುಣಾಮಯಿಯಾದ ತಾಯಿಯ ವಾತ್ಸಲ್ಯವನ್ನು ಕವನ ಸಾರ್ವತ್ರಿಕ ಅನುಭವದ ಕಕ್ಷೆಗೆ ತರುತ್ತದೆ. '.....ಅಪ್ಪನಗ್ನಿಯಾಕ್ರೋಶವನ್ನು ಥಂಡಿ ಮಾಡದವಳು.... ಕಣ್ಣೀರ ಕಣಕಣವ ಸುರಿಸಿದವಳು, ರೆಪ್ಪೆಯುಡಿಯಲ್ಲವಳ ಗೌರವಿಸುವೆ'- ಇಂಥ ಸಾಲುಗಳಲ್ಲಿ ಬಷೀರ್ ಅವರ ಅನುಭವ ಕಲಾತ್ಮಕತೆಯ ನೆಲೆಯಲ್ಲಿ ನಿಲ್ಲುವುದನ್ನು ಕಾಣುತ್ತೇವೆ' ಎಂದು ಪ್ರೊ|| ಎ. ಶ್ರೀಪಾದ ಅವರು ಕರುನಾಡ ಗೀತೆಯ ಮುನ್ನುಡಿಯಲ್ಲಿ ಹೇಳಿರುವ ಮಾತುಗಳೂ ಉಲ್ಲೇಖನೀಯ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೯. ಕನ್ನಡದ 'ಅವ್ವ' ಕವನಗಳು - ಒಂದು ವಿಶ್ಲೇಷಣೆ

-ಕಾಂತರಾಜಪುರ ಸುರೇಶ್*

ನಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಸಂಬಂಧಗಳಲ್ಲಿ ಅವ್ವನಿಗೆ ವಿಶೇಷವಾದ ಸ್ಥಾನಮಾನಗಳಿವೆ. ಈಕೆಯನ್ನು ತಾಯಿ, ಅವ್ವ, ಅಮ್ಮ ಎಂದು ಕರೆಯುವುದರ ಜೊತೆಗೆ ಅಜ್ಜಿ ಮನೆಯ ಪ್ರಭಾವವಿರುವ ಕೆಲವರು 'ಅಕ್ಕ' ಎಂದು ಸಂಬೋಧಿಸುವುದುಂಟು. ಆದರೆ ಗ್ರಾಮೀಣ ಸೊಗಡಿನ 'ಅವ್ವ' ಎಂಬಲ್ಲಿ ಹಿತವಿದೆ, ಪ್ರೀತಿಯಿದೆ, ಸೆಳೆತವಿದೆ. ಈ ಅವ್ವನ ಬದುಕಿನಲ್ಲಿ ಹಲವಾರು ಮಜಲುಗಳಿವೆ. ಒಂದೊಂದು ಅವ್ವನದು ಒಂದೊಂದು ಕತೆಯಾದರೂ, ಬಹುತೇಕ ಅವ್ವಂದಿರು ಕಷ್ಟದ ಸಂಕೋಲೆಯಲ್ಲಿಯೇ ಬೆಳೆದವರು; ಸಂಸಾರದ ರಥವನ್ನು ಏಕಾಂಗಿಯಾಗಿ ಎಳೆದವರು; ಮಣ್ಣಿನ ವಾಸನೆಯಲ್ಲಿ ಬದುಕಿದವರು; ಕರುಳ ಕುಡಿಯ ಭವಿಷ್ಯಕ್ಕಾಗಿ ದುಡಿದವರು, ಹೆಜ್ಜೆ ಹೆಜ್ಜೆಗೂ ನೋವುಂಡರು ತ್ಯಾಗಮಯಿಯಾದವರು. ಈ ಅಂಶಗಳೇ ಪಿ. ಲಂಕೇಶ್, ಎಲ್. ಹನುಮಂತಯ್ಯ, ಡಾ॥ ಸರಜೂಕಾಟ್ಕರ್‌ರವರ 'ಅವ್ವ' ಕವನಗಳು, ಬೇಂದ್ರೆಯವರ 'ನಲ್‌ತಾಯಿ', ಗಂಗಾಧರ ಚಿತ್ತಾಲರ 'ತಾಯಿ' ಹಾಗೂ ನಿಸಾರ್ ಅಹಮದ್‌ರವರ 'ಅಮ್ಮ ಆಚಾರ ನಾನು' ಕವನಗಳಲ್ಲು ಗೋಚರಿಸುತ್ತವೆ.

ಮಕ್ಕಳ ಲಾಲನೆ ಪಾಲನೆಯಲ್ಲಿ ಅವ್ವಂದಿರು ಸ್ವರ್ಗಸುಖ ಕಾಣುತ್ತಾರೆ. 'ಹೆತ್ತವಳಿಗೆ ಹೆಗ್ಗಣವೂ ಮುದ್ದು' ಎಂಬಂತೆ ತನ್ನ ಮಗು ಹೇಗಿದ್ದರೂ ಅವಳಿಗೆ ಅದೇ ಸಕಲವೂ ಕೂಡ. ಜಾನಪದದ ತಾಯಿ ತನ್ನ ಮಗನನ್ನು

ಆಡಿ ಬಾ ನನ ಕಂದ ಅಂಗಾಲ ತೊಳೆದೇನು
ಎಳನೀರಿನಂತ ತಿಳಿನೀರ । ತಕ್ಕೊಂಡು

* ನಂ. ೩೯೫, ೨೯ನೇ ಮುಖ್ಯರಸ್ತೆ, ೭ನೇ ಅಡ್ಡರಸ್ತೆ, ಬಿ.ಟಿ.ಎಂ. ಬಡಾವಣೆ, ೨ನೇ ಹಂತ, ಬೆಂಗಳೂರು-೫೬೦ ೦೭೬. ಮೊಬೈಲ್ : ೯೭೪೪೪೩೮೩೧೪೦.

ಬಂಗಾರದ ಮೋರೆ ತೊಳೆದೇನು
ಎಂದು ಹೇಳಿ ವಾತ್ಸಲ್ಯವನ್ನು ತೋರಿದ್ದಾಳೆ.

ಎಲ್. ಹನುಮಂತಯ್ಯನವರ 'ಅವ್ವ' ತನ್ನ ಮಗನ ಹರಿದ ಚಡ್ಡಿಗೆ ಬಿಳಿದಾರದಿಂದ ಚಿತ್ತಾರ ಮೂಡಿಸಿ ಬಡತನವನ್ನು ಮರೆಮಾಚಲು ಪ್ರಯತ್ನಿಸಿದ್ದಾಳೆ. ಬೆಳದಿಂಗಳಲ್ಲಿ ಊಟ ಮಾಡಿಸುತ್ತ ಸಂಭ್ರಮ ಪಡುವ ಈಕೆ ಹರಿದ ಸೀರೆಗಳ ಹಾಸಿಗೆಯ (ದಟ್ಟಿ) ಮೇಲೆ ಮಗನನ್ನು ಮಲಗಿಸಿ, ತಾನು ಈಚಲು ಚಾಪೆಯ ಮೇಲೆ ದೇಹವನ್ನು ದಂಡಿಸಿದ್ದಾಳೆ. ಕತ್ತಲೆಯ ಕಷ್ಟಗಳ, ಸಂಕೋಲೆಯಿಂದ ಪಾರಾಗಲು ಬೆಳಕಿನ ಸುಖವನ್ನು ಹುಡುಕುತ್ತ ಕಾಲಚಕ್ರದ ಜೊತೆಗೆ ಸವೆದಿದ್ದಾಳೆ. ತನಗೆ ಸಿಗದ ಅಕ್ಷರದ ಆಭರಣವನ್ನು ಮಗನು ತೊಡಲೆಂಬ ಬಯಕೆಯಿಂದ ನಡಿಗೆಯ ತಪಸ್ಸು ಮಾಡಿದ್ದಾಳೆ. ತನ್ನ ಮಗನು ಪುಸ್ತಕಗಳನ್ನು ಪಕ್ಕೆಯಲ್ಲಿ ಸಿಕ್ಕಿಸಿಕೊಂಡು ಕಾಲುದಾರಿಯ ಪಯಣಕ್ಕೆ ಸಿದ್ಧವಾದಾಗ ಹುಣಸೆ ಮರದಡಿಯಲ್ಲಿ ನಿಂತು ಸಂಭ್ರಮದ ಎಳನೀರನ್ನು ಚೆಲ್ಲಿದ್ದಾಳೆ. ಸರಜೂ ಕಾಟ್ಕರ್ ಅವರ 'ಅವ್ವ' ಮತ್ತೊಂದು ಹೆಜ್ಜೆ ಮುಂದೆ ಹೋಗಿ ತನ್ನ ಮಗನ ಶಾಲೆಗೆ ಬಂದು ಮಗನ ಅಭ್ಯಾಸದ ಬಗ್ಗೆ ಮಾಸ್ತರನ್ನು ಕೇಳುವಲ್ಲಿ ಮುತುವರ್ಜಿ ವಹಿಸಿದ್ದಾಳೆ. ಅವ್ವಂದಿರಿಗೆ ಇರಬೇಕಾದ ಮತ್ತೊಂದು ಕಾಳಜಿ ಇದು. ಈ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುವ ಸಾಮರ್ಥ್ಯವು ಅವಳಿಗಿದೆ. ಅದಕ್ಕಾಗಿಯೇ ಕವಿ ರಸ್ತೆ ದಾಟುವಾಗಲೂ ಇವಳ ಪ್ರತಿಬಿಂಬಕ್ಕೆ ಕೈಮುಗಿದಿದ್ದಾರೆ. ಅವಳ ಈ ಆಸಕ್ತಿಯೇ ಕವಿಗೆ ಎಂ.ಎ., ಪಿಎಚ್.ಡಿ.ಗಳನ್ನು ತಂದುಕೊಟ್ಟಿದೆ ಎಂಬ ಅಂಶವನ್ನು ನಾವು ಒಪ್ಪಲೇಬೇಕು. ಲಂಕೇಶರ 'ಅವ್ವ'ನು ಮಗ ಹಾಳಾದಾಗ ಸಿಟ್ಟಿಗೆದ್ದಿರುವುದು ತಾಯಿಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ತನ್ನ ಮಗನ ರೂಪಕ್ಕೆ ಅವ್ವಂದಿರು ಹಿಗ್ಗುತ್ತಾರೆ. ಮಕ್ಕಳು ಶಾಲೆಗೆ ಹೋಗಿ ಬರುವಾಗ ಮಾಂಸ ಬೇಸಿದ ಮಡಿಕೆ ತಳದ ಮಸಿಯನ್ನೇ ಕಣ್ಣುಬ್ಬಿಗೆ ಬಳಿದಿದ್ದಾಳೆ. ಮಾರಿ ಮಸಣಿ ಕಣ್ಣುಗಳ ದೃಷ್ಟಿ ಬಿದ್ದೆದೆಯೆಂದು, ದೃಷ್ಟಿ ನೀವಳಿಸಿ ಮೂರು ದಾರಿ ಕೂಡುವ ಸ್ಥಳಕ್ಕೆ ಕಟ್ಟಿಬರುವ ಚಿತ್ರಣ ಎಲ್. ಹನುಮಂತಯ್ಯನವರ 'ಅವ್ವ' ಕವನದಲ್ಲಿದೆ. ಮೂರು ದಾರಿಯಲ್ಲಿ ಯಾವುದಾದರು ಒಂದು ಕಡೆ ದೃಷ್ಟಿದೂರವಾಗಬಹುದೆಂಬ ಆಶಯ ಇಲ್ಲಿದೆ. ಲಂಕೇಶರ 'ಅವ್ವ'ನಲ್ಲಿ ನಿರೂಪಕರು ಯಾರದೋ ಮಾರ್ಗದರ್ಶನದಲ್ಲಿ ಮೂಢನಂಬಿಕೆಗಳ ವಿರುದ್ಧ ಪ್ರತಿಭಟಿಸಿ ಬೀಗುತ್ತಾರೆ. ಆದರೆ ಜ್ವರ ಬಂದು ಮಲಗಿದ್ದಾಗ ತನ್ನವ್ವನ ಸ್ಥಳೀಯ ನಂಬಿಕೆಯ ಲೇಪನದಿಂದ ಜ್ವರಬಿಟ್ಟಿದ್ದು ನೆನಪಾಗಿ ಕಾಡುತ್ತದೆ. ಈ ಕಾಡುವಿಕೆ ಹೆಚ್ಚಾದಂತೆಲ್ಲಾ ತನಗೆ ಯಾವುದು ಮೂಢನಂಬಿಕೆ, ಯಾವುದು ಅವ್ವನಿಗೆ ನಂಬಿಕೆ ಎಂಬ ಗೊಂದಲಕ್ಕೆ ಒಳಗಾಗುತ್ತಾರೆ. ಆಕೆ ತನ್ನ ಬಾಯಿಗೆ ಎಲೆ, ಭಜೆ, ಚಕ್ಕೆ, ಲವಂಗ ತಿನ್ನಿಸಿದ್ದು, ಕೊಬ್ಬರಿ ಖರ್ಜೂರಗಳನ್ನು ಮಮತೆಯಿಂದ ನೀಡಿದ್ದು ನೆನಪಾಗುತ್ತದೆ.

ಬಾಲ್ಯದಲ್ಲಿ ತನ್ನವ್ವನ ತೊಡೆ ಮೇಲೆ ತಲೆ ಇಟ್ಟು ಮಲಗಿದ್ದು, ತನ್ನ ಅವ್ವನ 'ತಾಯ್ತನದ ವಿನಯ ಮತ್ತು ಮಾನಗಳನ್ನು ಗೌರವಿಸಿದ್ದು ನಿರೂಪಕರಿಗೆ ದೊಡ್ಡ ಮೌಲ್ಯಗಳಾಗಿ ಕಾಣುತ್ತವೆ.

ಲಂಕೇಶರು 'ಅವ್ವ'ನನ್ನು ಫಲವತ್ತಾದ ಕಪ್ಪು ನೆಲಕ್ಕೆ ಹೋಲಿಸಿದ್ದಾರೆ. ಹಸಿರನ್ನು ಜೀವಂತಿಕೆಯ ಸಂಕೇತವಾಗಿಸಿದ್ದಾರೆ. ಎಷ್ಟು ಕಷ್ಟಪಡುತ್ತಾಳೋ, ಅಷ್ಟಷ್ಟು ಅವಳ ಅನುಭವ ಹೆಚ್ಚಾಗುತ್ತದೆ. ಮಣ್ಣಿನ ವಾಸನೆಯಲ್ಲಿಯೇ ಬೆಳೆದ ಈಕೆ ಒಂದು ಚೀಲ (ನೂರು ಸೇರು) ಜೋಳವನ್ನು ಎತ್ತಿ ತಂದೆಯನ್ನು ಮೆಚ್ಚಿಸಿ ಮದುವೆಯಾದವಳು. ಮನೆಯೊಳಗಿನ ಕೆಲಸಕ್ಕಷ್ಟೆ ಸೀಮಿತವಾಗದೆ ಮನೆ ಹೊರಗೂ ದುಡಿದು ತನ್ನ ಪತಿಗೆ ನೆರವಾದವಳು. ಮೆಣಸು, ಅವರೆ, ಜೋಳ, ತೊಗರಿಯನ್ನು ಬಿತ್ತಿದವಳು. ತನ್ನ ಕುಟುಂಬದಲ್ಲಿನ ಸುಖ–ಸಂತೋಷ, ನೋವು–ನಲಿವುಗಳಲ್ಲಿ ಭಾಗಿಯಾದವಳು. ಎಲ್. ಹನುಮಂತಯ್ಯನವರ 'ಅವ್ವ' ಸಾಂಸಾರಿಕ ಭಾರವನ್ನು ಒಬ್ಬಳೇ ಹೊತ್ತವಳು. ಬೆಳೆದ ಬೆಳೆಗಳನ್ನು ತಿನ್ನಲೊಲ್ಲದೆ ಸಂಸಾರ ರಥವನ್ನು ದಡ ಮುಟ್ಟಿಸಲು ಎಳ್ಳು–ಹುಚ್ಚೆಳ್ಳು ಉರುಳಿ, ಅಳ್ಳುಗಳನ್ನು ಮಾರಿದ್ದಾಳೆ. ಪುಡಿಗಾಸನ್ನು ಕುಡಿಕೆಯಲ್ಲಿ ಕೂಡಿಟ್ಟು ಕರುಳ ಬಳ್ಳಿಗಾಗಿ ಕಾದಿದ್ದಾಳೆ. ಲಂಕೇಶರ ಅವ್ವನು ಕೂಡ ಹಣ ಕೂಡಿಡುವ ಸ್ವಭಾವದವಳು. ಗಂಗಾಧರ ಚಿತ್ತಾಲರ 'ತಾಯಿ' ಎಂದೂ ರೇಗಿದವಳಲ್ಲ. ತನ್ನ ಎಲ್ಲ ಮಕ್ಕಳಿಗೂ ಬಡತನದ ಬೇಗೆ ತಿಳಿಯದಂತೆ ನೋಡಿಕೊಂಡ ಶ್ರಮಜೀವಿ. ಅವಳ ವಾತ್ಸಲ್ಯ ಬೆಟ್ಟದಷ್ಟು, ತಾಯಿಯ ಕಣ್ಣುಕಾವಲು ಸದಾ ಜಾಗೃತಗೊಂಡಿದೆ.

ಭೂಮಿತಾಯಿಗೆ ಬೀಜ ಬಿತ್ತಿದ ಮೇಲೆ ನಾವು ಮುಗಿಲ ಕಡೆ ಮುಖಮಾಡಿ ನಿಲ್ಲಬೇಕಾಗುತ್ತದೆ. ಸುಗ್ಗಿಯ ಕಾಲದಲ್ಲಿ ಮಳೆರಾಯನನ್ನು ಬರಬೇಡವೆಂದು ವಿನಂತಿಸಬೇಕಾಗುತ್ತದೆ. ಸಿಕ್ಕ ಪಸಲನ್ನು ಮಾರಲು ದಲ್ಲಾಳಿಗೆ ಆಶ್ರಯಿಸಬೇಕಾಗುತ್ತದೆ. ರೈತರ ಬದುಕಿನ ಈ ಸಮಸ್ಯೆಗಳು ಇಲ್ಲಿನ ಅವ್ವಂದಿರನ್ನು ಕಾಡಿರುವುದು ಸ್ಪಷ್ಟವಾಗುತ್ತದೆ. ಲಂಕೇಶರ ಅವ್ವ ನಾಶವಾದ ಬೆಳೆಗಾಗಿ, ಹಣಕ್ಕಾಗಿ ಕಣ್ಣೀರಿಟ್ಟಿದ್ದಾಳೆ. ಗಂಗಾಧರ ಚಿತ್ತಾಲರ 'ತಾಯಿ' ನೆಟ್ಟ ತುಳಿಸಿ, ನಿತ್ಯಪುಷ್ಪ ಹಚ್ಚಹಸಿರಾಗಿವೆ. ಗಿಡಗಳಿಗೆ ಪಾತಿಕಟ್ಟಿ ನಿತ್ಯ ನೀರು ಹಾಕುತ್ತಿದ್ದದ್ದು, ಒದ್ದೆ ಮಣ್ಣು ನಿರೂಪಕರ ಕಾಲಿಗೆ ಮೆತ್ತಿದ್ದು, ಗೊನೆಬಾಗಿನ ಹೊಂಬಾಳೆ, ಕಪ್ಪಗೆ ಹಚ್ಚಿದ ಬಸಲೆ, ಬಹು ಎತ್ತರಕ್ಕೆ ಬೆಳೆದು ತೂಗಿ ತೊನೆಯುತ್ತಿರುವ ತೆಂಗುಗಳ ನಡುವೆ ತನ್ನ ತಾಯಿಯ ಇರುವಿಕೆ ನೆನಪಾಗುತ್ತದೆ. ಡಾ॥ ಸರಜೂಕಾಟ್ಕರ್ ಅವರ ಅವ್ವ ನೆಟ್ಟಗಿಡ ಎಂದಿಗೂ ಬಾಡಲಿಲ್ಲ. ಇವಳು ಹಿಟ್ಟು ಬೀಸುವಾಗ, ರೊಟ್ಟಿ ಬಡಿಯುವಾಗ ಹಿಟ್ಟು ಮೆತ್ತಿಸಿಕೊಂಡು ಕಣ್ಣೀರು ಬೆರಸಿದ್ದಾಳೆ. ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಒಬ್ಬಳು ಮನೆಯ ಹೊರಗೆ ದುಡಿದರೆ, ಮತ್ತೊಬ್ಬಳು ಮನೆಯೊಳಗೆ

ದುಡಿಯಬೇಕು. ಅವಳು ತಿಂದು ಮುಗಿಸಿದರೆ ಇವಳು ಕೂಡಿಡುವ ಸ್ವಭಾವದವಳಾಗಬೇಕು. ಈ ಅಂಶಗಳೆಲ್ಲವೂ ನಮಗಿಲ್ಲ ಸ್ಪಷ್ಟವಾಗಿ ಗೋಚರಿಸುತ್ತವೆ.

ಅವ್ವಂದಿರು ಪ್ರಾಣಿಗಳ ಒಡನಾಡಿಗಳು. ಅವುಗಳ ಆರೈಕೆಯಲ್ಲಿ ಕಾಲ ಕಳೆಯುತ್ತಾರೆ. ಇದು ಅನಿವಾರ್ಯವು ಹೌದು. ಎಲ್. ಹನುಮಂತಯ್ಯನವರ 'ಅವ್ವ' ದಿಣ್ಣೆ ಹೊಲದಿಂದ ಪ್ರಾಣಿಗಳಿಗೆ ಹುಲ್ಲು ತಂದಿದ್ದಾಳೆ. ಸಾಮಾನ್ಯವಾಗಿ ಗ್ರಾಮೀಣ ಪರಿಸರದಲ್ಲಿ ಮುಂಜಾನೆ ಎದ್ದೊಡನೆ ಮನೆಗೆಲಸ ಮುಗಿಸಿ ಅವ್ವಂದಿರು ಹುಲ್ಲನ್ನು ಹೊಲಗದ್ದೆಗಳಿಂದ ಕೊಯ್ದು ತರುತ್ತಾರೆ. ಕೆಲವೊಮ್ಮೆ ಇಳಿಹೊತ್ತಿನಲ್ಲಿ ದನಕರುಗಳನ್ನು ಮೇಯಿಸುತ್ತಾ, ಜೊತೆ ಜೊತೆಯಲ್ಲೆ ಹುಲ್ಲು ಕೊಯ್ದು ಸಂಜೆ ಬರುವಾಗ ಮನೆಗೆ ತರುತ್ತಾರೆ. ಈ ಪ್ರಾಣಿಗಳ ಸಾವು ಅವ್ವಂದಿರನ್ನು ದಿಗ್ಭ್ರಾಂತರನ್ನಾಗಿಸುತ್ತದೆ. ಇವುಗಳು ಕೆಲವೊಮ್ಮೆ ತಪ್ಪಿಸಿಕೊಂಡು ಮನಸ್ಸು ಬಂದ ಕಡೆಗೆ ಊರೂರಿಗೆ ಹೋಗುತ್ತವೆ. ಇವನ್ನು ಹುಡುಕುವ ಜವಾಬ್ದಾರಿಯನ್ನು ಅವ್ವಂದಿರು ಹೊರುತ್ತಾರೆ. ಲಂಕೇಶರ ಅವ್ವನು ಸತ್ತ ಕರುವಿಗಾಗಿ ಕಣ್ಣೀರಿಟ್ಟಿದ್ದಾಳೆ. ತಪ್ಪಿಸಿಕೊಂಡ ಮುದಿಯ ಎಮ್ಮೆಯನ್ನು ಹುಡುಕಲು ಎಷ್ಟೋಬಾರಿ ಊರೂರು ಅಲೆದಿದ್ದಾಳೆ. ಈ ಚಿತ್ರಣ ನಮಗೆ ಇತರ ಕವಿಗಳ ಕವನಗಳಲ್ಲಿ ಸಿಗುವುದಿಲ್ಲ.

ಅವ್ವಂದಿರು ತಮ್ಮ ಮಕ್ಕಳ ಮದುವೆಗೆ ಆಸಕ್ತಿ, ಹುರುಪುಗಳನ್ನು ತುಂಬಿಕೊಳ್ಳುತ್ತಾರೆ. ನಿಸಾರ್ ಅಹಮದ್‌ರವರ 'ಅವ್ವ' ಸಂಪ್ರದಾಯಸ್ಥರು. ತನ್ನ ಸೊಸೆಯನ್ನು ಹುಡುಕುವಾಗ ಎಚ್ಚರಿಕೆ ವಹಿಸುತ್ತಾಳೆ. ಅವಳು ಹಾಗೆ ಇವಳು ಹೀಗೆ, ಈಕೆ ಎಲ್ಲ ಸರಿ ಆದರೆ ಉದ್ದ ನಾಲಗೆ ಮಾತ್ರ, ಒಬ್ಬಾಕೆ ಲಂಕಿಣಿ, ಮತ್ತೊಬ್ಬಳು ಬೆದರುಬೊಂಬೆ, ಇನ್ನೊಬ್ಬಳ ಹಲ್ಲು ಸಣ್ಣವು ಎಂದು ತಾತ್ಸಾರ ಮಾಡುತ್ತಾಳೆ. ಇದರ ಪರಿಣಾಮವಾಗಿ ನಿರೂಪಕರ ಮದುವೆಗೆ ಬಹಳ ದಿನ ಕಾಲ ಕೂಡುವುದಿಲ್ಲ. ಅಮ್ಮನಿಗೆ ಖುರಾನು, ನಮಾಜು ಎಂದರೆ ಪ್ರೀತಿ. ರಂಜಾನಿನ ಉಪವಾಸ ಮತ್ತು ಮುಸ್ಲಿಂ ಧಾರ್ಮಿಕಾಚಾರಗಳಲ್ಲಿ ಆಸಕ್ತಿ. ಬುರ್ಖಾ ತೊಡದೆ ಬೀದಿಯಲ್ಲಿ ಹಾದುಹೋಗುವ ಯಾವೊಂದು ಮುಸ್ಲಿಂ ಮಹಿಳೆಯನ್ನು ಕಂಡು ಕಿಡಿಕಿಡಿಯಾಗುತ್ತಿದ್ದಳು. ಗಂಡಸು ಎದುರು ಮೈ ಪ್ರದರ್ಶನ ಮಾಡುವ ಗಂಡುಬೀರಿಗಳು ಗಂಡಂದಿರ ಜೊತೆ ಬಾಳಿಯಾರೆ ? ಎಂದು ಪ್ರಶ್ನಿಸುತ್ತಿದ್ದಳು.

ನಿರೂಪಕರು 'ಖುದ್ದಾಗಿ ನೋಡಿ ಒಪ್ಪಿದ ವಿದ್ಯಾವಂತಳನ್ನೇ ಕೈ ಹಿಡಿವೆನು' ಎಂದಾಗ ನಾನು ಓದಿದ್ದೆನೇನೊ ಪೆದ್ದ? ಮದುವೆಗೆ ಮುಂಚೆ ಹುಡುಗ ಹೆಣ್ಣು ನೋಡುವುದು ಧರ್ಮನಿಷಿದ್ಧ ಎಂದು ನಿರೂಪಕರ ಬಾಯಿ ಮುಚ್ಚಿಸಿದರು. ಅಪ್ಪ ಮಗನ ಪರ ನಿಂತಾಗ ಕಣ್ಣೀರು ಸುರಿಸಿ ಪ್ರತಿಭಟಿಸಿದ್ದಳು. ಹಲವು ದಿನಗಳ ಬಳಿಕ ಅವ್ವನಿಗೆ ಜ್ಞಾನೋದಯವಾಗಿ ಮಗನ ನಿಲುವನ್ನು ಬೆಂಬಲಿಸಿದಳು. ನಿರೂಪಕರ ಹೆಂಡತಿ ನಯನಾಜೂಕಿನವಳಾದರೂ ಮೈತುಂಬ ಸಿಂಗರಿಸಿಕೊಂಡು ಬುರ್ಖಾತೊಟ್ಟು

ಲೇಖಕರೊಂದಿಗೆ ತಿರುಗಾಡಲು ಸಿದ್ಧವಾದಳು. ಅವ್ವನ ಧಾರ್ಮಿಕ ನಂಬಿಕೆಗಳಿಗೆ ಮನ್ನಣೆ ಸಿಕ್ಕಿರುವುದು ಸ್ವಾಗತಾರ್ಹ. ತನ್ನ ಮಗನ ಮದುವೆಯ ವಿಚಾರಗಳು ಇನ್ನಿತರ 'ಅವ್ವ' ಕವನಗಳಲ್ಲಿ ಚಿತ್ರಿತವಾಗಿಲ್ಲ.

ಇಲ್ಲಿ ಬರುವ ಯಾವ ಅವ್ವಂದಿರೂ ನಯ-ನಾಜೂಕಿನವರಲ್ಲ. ಎಲ್. ಹುಮಂತಯ್ಯನವರ 'ಅವ್ವ' ಕೊರಳಿಗೆ ಕರಿಮಣಿಯ ಪೋಣಿಸಿಕೊಂಡು ಸಂಭ್ರಮಿಸಿದ್ದಾಳೆ. ಸರಜೂ ಕಾಟ್ಕರ್ ಅವರ ಅವ್ವ ಹಣೆಯ ಮೇಲೆ ದೊಡ್ಡ ಕುಂಕುಮವಿಟ್ಟು, ಸಾದಾಸೀರೆ ತೊಟ್ಟಿದ್ದಾಳೆ. ರೇಷ್ಮೆ ಸೀರೆ ಉಟ್ಟಿದ್ದನ್ನು, ಬಂಗಾರ ತೊಟ್ಟಿದ್ದನ್ನು ಕವಿಯೂ ಕಂಡಿಲ್ಲ. ಲಂಕೇಶರ ಅವ್ವ ಹಳೆಯ ಚಿಂದಿ ಬಟ್ಟೆಯುಟ್ಟವಳು. ಮನೆಯ ಉದ್ಧಾರಕ್ಕಾಗಿ ಕೀಳರಿಮೆ ಅಪಹಾಸ್ಯ, ಜಗಳ ಎಲ್ಲವನ್ನು ಮಾಡುತ್ತಾಳೆ. ಎಲ್. ಹನುಮಂತಯ್ಯನವರ ಅವ್ವನೂ ಗಂಡನ ತುಂಟಾಟಕ್ಕೆ ತಪ್ಪು ಮಾಡಿ ತಪ್ಪು ಕಾಣಿಕೆ ಕಟ್ಟಿದ್ದಾಳೆ. ಇವಳು ಹಾಲನೆರೆದರೂ ವಿಷವನ್ನೇ ಕಕ್ಕುವ ಸರ್ಪ ವ್ಯಕ್ತಿತ್ವದ ಜನ ಸಮುದಾಯದ ನಡುವೆ ಬದುಕಿದವಳು. ಇಂಥವರ ನಡುವೆಯೇ ಸಿಹಿಯನ್ನು ಬೇಡಿದವಳು. ಆದರೆ ಸರಜೂಕಾಟ್ಕರ್ ಅವರ 'ಅವ್ವ' ಯಾರಿಗೂ ಬೇಸರವಾಗದೆ ಬದುಕಿದ್ದಾಳೆ. ಈಕೆ ಶಾಂತವಾಗಿ ಒಂದು ಕಡೆ ಕೂರದೆ ಜಗತ್ತಿನ ನೋವನ್ನು ತನ್ನ ದುಃಖವಾಗಿ ಅಪ್ಪಿಕೊಂಡಿದ್ದಾಳೆ. ಲಂಕೇಶರ ಅವ್ವ ತನ್ನ ಜವಾಬ್ದಾರಿಯನ್ನು ಬೇರೆಯ ಹೆಗಲಿಗಿರಿಸಿ ಕಣ್ಮರೆಯಾಗಿದ್ದಾಳೆ. ಹನುಮಂತಯ್ಯನವರ ಅವ್ವನಿಗೆ ತನ್ನ ಕನಸು ನನಸಾಗುವ ಮುನ್ನವೇ ಸಾವು ಬಂದೆರಗಿದೆ.

ಲಂಕೇಶರು ಅವ್ವನನ್ನು ಕಾಡಿನಲ್ಲಿರುವ ಕರಡಿಗೆ ಬೇಕಿರುವುದು ಬದುಕೇ ಹೊರತು ಭಗವದ್ಗೀತೆಯಲ್ಲ ಎಂದಿರುವುದು ಔಚಿತ್ಯಪೂರ್ಣವಾಗಿದೆ. ಸಾಮಾನ್ಯ ಹೆಣ್ಣೊಬ್ಬಳು ಮಗ-ಗಂಡ ಮೊದಲಾದವರ ಬದುಕಿನ ಊರುಗೋಲಾಗಿ ನಿಂತು ಮಣ್ಣಿನ ವಾಸನೆಯಲ್ಲಿಯೇ ಬದುಕಿ ಆಕಾಶದೆತ್ತರಕ್ಕೆ ಬೆಳೆದು ಬಿದ್ದಂತೆ ಅವ್ವಂದಿರು ಕಳಚಿ ಬಿದ್ದಿದ್ದಾರೆ. ಅವ್ವನ ಸಾವಿಗೆ ಪ್ರಕೃತಿಯ ದುಃಖವನ್ನು ಬೆರೆಸುವ ಪ್ರಯತ್ನ ಸರಜೂಕಾಟ್ಕರ್ 'ಅವ್ವ' ಕವನದಲ್ಲಿ ಸೊಗಸಾಗಿ ಮೂಡಿಬಂದಿದೆ.

ಮಟಮಟ ಮಧ್ಯಾಹ್ನದಲ್ಲಿ ಧಾರಾಕಾರವಾಗಿ ಆಕಾಶ ಅಳುತ್ತಿದೆ. ಈ ಸಂದಿಗ್ಧತೆಯಲ್ಲಿಯೇ ಸೂರ್ಯ ಮುಳುಗಿದ್ದಾನೆ. ಕತ್ತಲೆ ಆವರಿಸಿ, ಚಲನೆಯೇ ಇಲ್ಲದ ಪ್ರಕೃತಿಯ ನಡುವೆ ಕಾಡಿಗೆ ಹೋದ ದನಗಳು ಮರಳಿ ಬಂದಿವೆ. ಕೋಗಿಲೆಯು ಹಾಡುವುದಿಲ್ಲ. ಹೂವು ಅರಳುವುದಿಲ್ಲ. ಹಾವು ಹುತ್ತವನ್ನು ಸೇರಿಕೊಂಡಿದೆ. ಗ್ರಹಣ ಕೂಡ ಹಗಲಿನಲ್ಲಿಯೇ ಹಿಡಿದಿದೆ. ಇಂತಹ ಅದ್ಭುತ ಪ್ರತಿಮೆಗಳು ಮತ್ತೆಲ್ಲೂ ಸಿಗುವುದಿಲ್ಲ.

ಅವ್ವ ಸತ್ತದಿನ ಭೂಕಂಪವಾಯಿತು ನೆಲದಲ್ಲಿ
ಎಷ್ಟು ಕೊರೆದರೂ ಹತ್ತಲಿಲ್ಲ ನೀರು

ಹರಿದು ಬಿದ್ದಿತು ಆಕಾಶ
ಉರಿದು ಬೂದಿಯಾದ ಚಂದ್ರ

ಅವ್ವ ಸತ್ತ ಮಾರನೆಯ ದಿನವೂ ಮನಸ್ಸುಗಳು ಬಿರುಕುಬಿಟ್ಟಿವೆ. ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾದುದರ ಪರಿಣಾಮ ಮನೆಗಳ ತುಂಬ ಗೋಡೆಗಳು ಎದ್ದಿವೆ. ಇದರ ಪರಿಣಾಮವಾಗಿ ಪ್ರೀತಿ ಸತ್ತು ಮಮತೆ ಗಡಿಪಾರಾಗಿದೆ. ಯಾರ ಮುಖದಲ್ಲು ಕಳೆಯಿಲ್ಲ, ಎಲ್ಲೂ ಮಳೆಯಿಲ್ಲ. ಹಸಿರು ಕೂಡ ಅವ್ವನ ಜೊತೆ ಹೊರಟಿದೆ. ಯಾವ ಗಿಡದಲ್ಲಿಯೂ ಒಂದು ಪಕ್ಷಿಯೂ ಕುಳಿತಿಲ್ಲ. ಇಲ್ಲಿ ಸೂತಕ ಛಾಯೆಯ ಚಿತ್ರಣವಿದೆ.

ಬೇಂದ್ರೆಯವರು ತಿಳಿವಳಿಕೆಯಂತಹ ತಿಳಿಗೇಡಿ ಎಲ್ಲಿಯೂ ಇಲ್ಲ. ಕಳೆದುಕೊಂಡ ಮೇಲೆ ಅದರ ಬೆಲೆ ತಿಳಿಯುವುದು ಎಂದು ತಾಯಿಯ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ತಾಯಿ ಇದ್ದಾಗ ಅವಳನ್ನು ತಿಳಿದುಕೊಳ್ಳವಷ್ಟರಲ್ಲಿ ಅವಳ ಅಳಿವಾಗಿದೆ. ಅದಕ್ಕಾಗಿ ಯಾವ ಜನ್ಮದಲ್ಲಿ, ಯಾವ ಸೇವೆಯ ಮಾಡಿ ಋಣವ ತೀರಿಸಲೆಂದು ಕವಿ ಮರುಗಿದ್ದಾರೆ. ಅವಳ ನೆನಪಿನಲ್ಲಿ ಬದುಕ ಕಳೆಯುವುದೆ ಜೀವಕ್ಕೆ ನಿಯಮವಾಗಿದೆ. ನಿನ್ನಂಥ ತಾಯಿ ನನಗಿನ್ನು ಸಿಕ್ಕುವಳೆ ? 'ಬಾ ಮಗನೇ' ಎಂದು ನಕ್ಕು ಹರಸುತ್ತಾಳೆಯೆ? ಮರಣದ ಹೊತ್ತಿನಲ್ಲು ನಾನು ಜೊತೆಗಿರಲಿಲ್ಲ. ಆಶೀರ್ವಾದ ಬೇಡಲಿಲ್ಲವೆಂದು ಚಿಂತಿಸುತ್ತಾರೆ.

ಅವ್ವ ಸತ್ತ ಅದೆಷ್ಟೋ ದಿನಗಳ ನಂತರ ಹೊಸ ಚುಕ್ಕಿ ಹುಟ್ಟಿದೆ. ಚಂದ್ರನ ಪಕ್ಕ ಚಂದ್ರನ ಸಮಾನ ಮತ್ತೆ ಬಾನು ಬೆಳಗಿದೆ. ಸತ್ತ ಅವ್ವನೇ ಮತ್ತೆ ಮೂಡಿ ಬದುಕಿನಲ್ಲಿ ಬೆಳಕ ಹರಿಸಿದಳು. ಇಂತಹ ತ್ಯಾಗಮಯಿ, ಗುಣ–ಶೀಲೆಯಾದ 'ಅವ್ವ'ನನ್ನು ಕುರಿತು ಸರಜೂಕಾಟ್ಕರ್ ಅವರು ಹೀಗೆ ಪ್ರಶ್ನಿಸಿದ್ದಾರೆ.

ಹೇಳು ಹೃದಯದ ಯಾವ ಮೂಲೆಯಲ್ಲಿ
ನಿನ್ನ ಹೆಸರನ್ನು ಕೊರೆದುಕೊಳ್ಳಲಿ?
ಜಗತ್ತಿನ ಅದ್ಯಾವ ವಿಶ್ವವಿದ್ಯಾಲಯವನ್ನು ನಿನ್ನ ಹೆಸರಿನಿಂದ ಕರೆಯಲಿ?

ಅವ್ವ ಕವಿಗೆ ಒಟ್ಟು ವಿಶ್ವವಿದ್ಯಾಲಯಗಳ ಸಮುಚ್ಚಯ. ಜಗತ್ತಿನ ಪ್ರತಿಯೊಬ್ಬಳು ಅವ್ವಂದಿರಿಗೂ ಇಂತಹ ಗೌರವ ಸಿಗಬೇಕು. ಅವಳ ಪ್ರೀತಿಗೆ, ತ್ಯಾಗಕ್ಕೆ ನಾವು ಇಷ್ಟಾದರೂ ಸ್ಪಂದಿಸಿದಾಗ ನಮ್ಮ ಬದುಕಿಗೆ ಅರ್ಥಸಿಗುತ್ತದೆ; ಜೀವನ ಸಾರ್ಥಕತೆ ಕಂಡುಕೊಳ್ಳುತ್ತದೆ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ–ಜೂನ್, ೨೦೧೩

# ೧೦. ವಿಜಯನಗರ ಕಾಲದ ವಾಸ್ತು ಶಿಲ್ಪ

–ಡಾ॥ ಎಂ. ಎಸ್. ಪ್ರಭಾಕರ್*

ಸನಾತನ ಧರ್ಮವನ್ನು ಪಾಲಿಸುವ ಭಾರತೀಯರನ್ನು ಅವರವರ ಮನೋಧರ್ಮಕ್ಕೆ ತಕ್ಕಂತೆ ಮೂರು ವರ್ಗಗಳಾಗಿ ವಿಂಗಡಿಸಿದ್ದಾರೆ. ಆತ್ಮ ಮತ್ತು ಪರಮಾತ್ಮ ಇವುಗಳ ಸಂಬಂಧ ಹಾಗೂ ಸಾಕಾರ ನಿರಾಕಾರ ರೂಪಗಳಲ್ಲಿ ದೈವತ್ವದ ಆರಾಧನೆ ಇವೇ ಕಾರಣಮೂಲ ಎನಿಸಿದೆ. ಇದು ನಮ್ಮ ಸನಾತನ ಧರ್ಮವನ್ನು ಹಿಡಿದಿಟ್ಟಿರುವ ತಿರುಳು. ಒಂದು ತಾತ್ತ್ವಿಕ ಸಿದ್ಧಾಂತವೆನಿಸಿದರೆ ಮತ್ತೊಂದು ಪ್ರಾಯೋಗಿಕ ಹಂತ.

ನಿರಾಕಾರ ರೂಪಿ ಭಗವಂತನನ್ನು ಅರಿತವರು ಅತಿ ವಿರಳ. ಇವರು ತಮ್ಮ ಪಾಡಿಗೆ ತಾವು ಬದುಕುವವರು. ಯಾವ ಆಚರಣೆಗೂ ಒಳಪಡುವುದಿಲ್ಲ. ಎಲೆಮರೆಯಕಾಯಿಯಂತೆ ಇವರ ಬದುಕು. ಇವರದ್ದು ಅತಿ ಸಣ್ಣ ಗುಂಪು.

ಎರಡನೆಯ ಗುಂಪು ತುಸು ದೊಡ್ಡದು. ಆಚಾರ–ವಿಚಾರಗಳಲ್ಲಿ ಇವರು ಅಚ್ಚುಕಟ್ಟು, ಇವರು ಯೋಜಿಸಬಲ್ಲರು. ಆದರೆ ಸ್ವಲ್ಪ ಮಟ್ಟಿಗೆ ಮಾತ್ರ. ಪೂಜೆ ಪುನಸ್ಕಾರ, ವ್ರತ ನಿಯಮಾದಿಗಳು, ಧಾರ್ಮಿಕ ಕೈಂಕರ್ಯಗಳು, ಉತ್ಸವ ಮಹೋತ್ಸವಗಳು, ಎಲ್ಲವನ್ನೂ ಲೋಪವಿಲ್ಲದಂತೆ ಆಚರಿಸುತ್ತಾರೆ. ಪ್ರಚಾರ ಪ್ರಿಯರೂ ಹೌದು. ಲೋಪವಾದಲ್ಲಿ ಆತಂಕಪಡುತ್ತಾರೆ.

ಮೂರನೆಯ ಗುಂಪು ಅತಿದೊಡ್ಡದು. ತಿಳಿದವರ ಮಾತನ್ನು ಚಾಚೂ ತಪ್ಪದೆ ಪಾಲಿಸುತ್ತಾರೆ. ಇವರು ಯೋಚಿಸಲಾರರು. ಈ ವಿಗ್ರಹದಲ್ಲಿ ದೇವರಿದ್ದಾನೆ ಎಂದು ತೋರಿದಲ್ಲಿ ಭಕ್ತಿಪರವಶತೆಯಿಂದ ನಡೆದುಕೊಳ್ಳುತ್ತಾರೆ. ಇವರು ಮುಗ್ಧರು. ದೇವರ ಹೆಸರಿನಲ್ಲಿ ಇವರನ್ನು ವಂಚಿಸಲು ಸಾಧ್ಯವಿದೆ. ಭಗವದ್ಗೀತೆಯ ಶ್ಲೋಕವೊಂದಿದೆ. (ಪ್ರಕೃತೇಃಗುಣ ಸಂಮೂಢಾಃ ಸಜ್ಜಂತೇ ಗುಣಕರ್ಮಸು । ತಾನ ಕೃತ್ಸ್ನವಿದೋ

* 'ಪದ್ಮಪ್ರಭಾ', ನಂ. ೪೨, ಬ್ಲಾಕ್ ೧೭, ಬ್ಯಾಂಕ್ ಕಾಲೋನಿ, ಶ್ರೀರಾಂಪುರ, ೨ನೇ ಹಂತ, ಮೈಸೂರು–೫೭೦ ೦೨೩. ಮೊಬೈಲ್ : ೯೮೪೫೪೯೧೫೪೫.

ಮಂದಾನ್ ಕೃತ್ಸವಿನ್ನ ವಿಚಾಲಯೇತ್ (೩.೨೯)

ಪ್ರಕೃತಿಯ ಗುಣಗಳಿಂದ ಮೋಹಪರವಶವಾದವರು ಆಯಾ ಗುಣ ಮತ್ತು ಕರ್ಮಗಳಲ್ಲಿ ಆಸಕ್ತರು ಹಾಗೂ ಅದರಂತೆ ನಡೆಯುತ್ತಾರೆ. ಜ್ಞಾನಿಗಳಾದವರು ಅಜ್ಞಾನಿಗಳ ಅಂಧ ಶ್ರದ್ಧೆಯನ್ನು ಚಂಚಲಗೊಳಿಸಬಾರದು.

ಈ ಕಲ್ಲಿನಲ್ಲಿ ದೇವರಿದ್ದಾನೆ ಎಂದಲ್ಲಿ ಅವನಿಗೆ ಅಚಲ ನಂಬಿಕೆ. ಭಕ್ತಿಪರವಶನಾಗಿ ಆರಾಧಿಸುತ್ತಾನೆ. ಆ ಕಲ್ಲಿನಲ್ಲಿ ಕಡೆದ ಮೂರ್ತಿಯೇ ಅವನಿಗೆ ಸರ್ವಸ್ವ, ಅದಕ್ಕಿಂತ ಹೆಚ್ಚಾಗಿ ಯೋಚಿಸುವುದಿಲ್ಲ, ಯೋಚಿಸಲಾರ. ಅಂತಹವನ ನಂಬಿಕೆಯನ್ನು ಹಾಳುಮಾಡಬಾರದು. ಪ್ರತಿಮಾ ಸ್ವಲ್ಪ ಬುದ್ಧೀನಾಂ–ಇದು ವಿಷ್ಣು ಸಂಹಿತೆಯ ಉಕ್ತಿ. ಗೀತೆಯಲ್ಲಿ ಹೇಳಿದ ಮಾತನ್ನು ಮತ್ತೊಂದು ವಿಧದಲ್ಲಿ ಬಣ್ಣಿಸಲಾಗಿದೆ. ದೇವರು, ದೇವಾಲಯ, ಸಾಕಾರ ರೂಪಿ ಭಗವಂತ, ಅವನ ಅರ್ಚನೆ ಆರಾಧನೆ, ಇವುಗಳು ರೂಪ ತಳೆದದ್ದು ಇವರಿಗಾಗಿ. ಕೆಲವೊಮ್ಮೆ ಇತಿಹಾಸದಲ್ಲಿ ಘಟಿಸುವ ಘಟನಾವಳಿಗಳು ಈ ಜನರ ನಂಬಿಕೆಗಳನ್ನು ಬುಡಮೇಲು ಮಾಡುತ್ತದೆ. ಅದು ಒಂದು ದೊಡ್ಡ ದುರಂತ. ಅಂತಹ ದುರಂತವೊಂದು ದಕ್ಷಿಣ ಭಾರತವನ್ನು ಪೂರ್ತಿಯಾಗಿ ಆವರಿಸಿತ್ತು. ಈ ಧಾಳಿಯಲ್ಲಿ ಸಾಂಸ್ಕೃತಿಕವಾಗಿ ಹೆಚ್ಚು ನಷ್ಟ ಅನುಭವಿಸಿದ್ದು ಕರ್ನಾಟಕ. ಒಟ್ಟಾರೆ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಜೀವನ ಅಸ್ತವ್ಯಸ್ತವಾಯಿತು. ಇದರಿಂದ ಚೇತರಿಕೆ ಉಂಟಾಗಲು ಹಲುವು ದಶಕಗಳು ಬೇಕಾಯಿತು. ಆಗ ಉದಯವಾದದ್ದು ಕರ್ನಾಟಕ ಸಾಮ್ರಾಜ್ಯ ಅಥವಾ ವಿಜಯನಗರ ಸಾಮ್ರಾಜ್ಯ. ಅಂದಿನವರೆಗೆ ಪ್ರಚಲಿತದಲ್ಲಿದ್ದ ಹೊಯ್ಸಳರ ಕಾಲದ ದೇವಾಲಯ ವಾಸ್ತು ಪರಂಪರೆ ಕಾಲಗರ್ಭದಲ್ಲಿ ಅಡಗಿಹೋಯಿತು. ಮೃದುವಾದ ಶಿಲೆಯಲ್ಲಿ ಅರಳುತ್ತಿದ್ದ ದೇವಾಲಯ ಶೈಲಿಗಳು, ಸಂಪ್ರದಾಯಗಳು ಹಾಗೂ ಶಿಲ್ಪಗಳು ಕಮರಿಹೋದವು. ಈ ಶಿಲ್ಪಚಾತುರ್ಯವನ್ನು ಪ್ರದರ್ಶಿಸಿದ ರೂವಾರಿಗಳು ಅಜ್ಞಾತರಾದರು. ಅವರು ಪ್ರದರ್ಶಿಸಿದ ಕಾಣ್ಕೆಗಳು ಅರ್ಥವಾಗದ ಪಠ್ಯವಾಯಿತು. ಇಂದಿಗೂ ಕನ್ನಡ ನೆಲೆದಲ್ಲಿ ಬೆಳೆದ ವಾಸ್ತುಶಿಲ್ಪ ಶೈಲಿ ಇಲ್ಲವೆಂಬ ಕೊರಗು ನಮ್ಮನ್ನು ಬಾಧಿಸುತ್ತದೆ. ನಾವು ಸಾಂಸ್ಕೃತಿಕವಾಗಿ ಕಳೆದುಕೊಂಡದ್ದು ಹೆಚ್ಚು ಎನ್ನಬಹುದು. ವಿಜಯನಗರ ಸಾಮ್ರಾಜ್ಯದ ಆರಂಭ ಕ್ರಿ.ಶ. ೧೩೩೬ ರಲ್ಲಿ. ಮೂರು ಸಂತತಿಗಳ ವೈಭವದ ಆಳ್ವಿಕೆಯನಂತರ ಕ್ರಿ.ಶ. ೧೫೬೫ರಲ್ಲಿ ಅಸ್ತಂಗತವಾಯಿತು. ಇದೂ ಒಂದು ದೊಡ್ಡ ದುರಂತವೇ. ದಖ್ಖನ್ನಿನ ಐದು ಸುಲ್ತಾನರು ಒಟ್ಟುಗೂಡಿ ವಿಜಯನಗರದ ಮೇಲೆ ಧಾಳಿ ನಡೆಸಿದರು. ವಿಜಯನಗರದ ರಾಜಧಾನಿ ಹಾಳು ಹಂಪೆಯಾಯಿತು. ಆಡಳಿತ ಹಂಪೆಯಿಂದ ದೂರದ ಪೆನುಗೊಂಡೆಗೆ ಸ್ಥಳಾಂತರವಾಯಿತು. ಸಾಮಂತರುಗಳು ಸ್ವತಂತ್ರನಾಯಕರಾದರು. ವಿಜಯನಗರೋತ್ತರ ಎನಿಸಿದರು. ವಾಸ್ತುಶೈಲಿಯಲ್ಲಿಯೂ

ಈ ರೂಪ ಪ್ರಭಾವಗಳು ಬೆಳೆದವು. ಈ ಬೆಳವಣಿಗೆ ವೆಲ್ಲೂರು, ಮಧುರೈ, ರಾಮೇಶ್ವರಗಳವರೆಗೆ ವಿಸ್ತರಿಸಿತು. ವಿಜಯನಗರ ಅರಸರ ಕಾಲದಲ್ಲಿ ಕರ್ನಾಟಕದಲ್ಲಿ ನೂರಾರು ದೇವಾಲಯಗಳು ರಚನೆಗೊಂಡರೂ ರಾಜಧಾನಿಯಲ್ಲಿ ವೈಭವಯುತವಾಗಿ ಬೆಳೆದದ್ದು ಹೆಚ್ಚು. ಈ ಅರಸರು ಎಲ್ಲಾ ಧರ್ಮಗಳನ್ನೂ ಸಮಾನವಾಗಿ ಕಂಡವರು. ಇವರ ಧರ್ಮ ಸಹಿಷ್ಣುತೆ, ಆಡಳಿತ ನೀತಿಯಲ್ಲಿಯೂ ಇಣುಕಿದೆ.

ಬೇಲೂರು ಶಾಸನದಲ್ಲಿರುವ "ಯಂ ಶೈವಾ ಸಮುಪಾಸತೇ"ಯ ಉಲ್ಲೇಖ ಸರ್ವಧರ್ಮ ಸಹಿಷ್ಣುತೆಗೆ ಶ್ರವಣಬೆಳಗೊಳದ ಬುಕ್ಕರಾಯನ ಶಾಸನ ಆಡಳಿತ ನೀತಿಗೆ ಹಿಡಿದ ಕೈಗನ್ನಡಿಯಾಗಿದೆ. ಆದರೂ ರಾಜಮನೆತನಕ್ಕೆ ವೈಯಕ್ತಿಕ ಧರ್ಮವೆಂದಿದೆಯಷ್ಟೆ ಹಾಗಾಗಿ ವೈಷ್ಣವ ಧರ್ಮ ಹೆಚ್ಚು ಮೇಲುಗೈ ಎನಿಸಿದೆ. ಇದನ್ನು ದೋಷವೆನ್ನಲಾಗದು.

ಕರ್ನಾಟಕದಲ್ಲಿ ಹಂಪೆಯನ್ನು ಬಿಟ್ಟರೆ ಹೆಚ್ಚಿನ ದೇವಾಲಯಗಳು ಕರ್ನಾಟಕದ ದಕ್ಷಿಣಭಾರತದಲ್ಲಿವೆ ಎನ್ನಬಹುದು. ಇವು ಚೋಳ-ಗಂಗ ನೊಳಂಬರ ಕಾಲದ ದೇವಾಲಯಗಳ ಪರಿಸರದಲ್ಲಿ ಹರಡಿವೆ ಎನ್ನಬಹುದು. ಇದಕ್ಕೆ ಐತಿಹಾಸಿಕ ಕಾರಣಗಳಿವೆ. ಹೊಯ್ಸಳರ ಕಾಲದ ದೇವಾಲಯಗಳ ಪರಿಸರದಲ್ಲಿ ಬೆಳದಿಲ್ಲವೆಂದು ಗುರುತಿಸಬಹುದು.

ವಿಜಯನಗರ ಕಾಲದ ವಾಸ್ತುಶೈಲಿಯ ಪ್ರಾರಂಭ ಶೃಂಗೇರಿಯ ವಿದ್ಯಾಶಂಕರ ದೇವಾಲಯದಿಂದ. ಇದು ಪ್ರಥಮ ಕೊಡುಗೆ ಎನಿಸಿದೆ. ಕ್ರಿ.ಶ. ೧೩೩೮ ಮತ್ತು ಕ್ರಿ.ಶ. ೧೩೫೬ರ ಶಾಸನಗಳಲ್ಲಿ ಇದರ ಉಲ್ಲೇಖವಿದೆ. ಕ್ರಿ.ಶ. ೧೩೩೮ ರಲ್ಲಿ ಇಂದಿನ ವಿದ್ಯಾಶಂಕರ ದೇವಾಲಯದ ಲಿಂಗ ಪ್ರತಿಷ್ಠಾಪನೆಯಾಗಿರಬಹುದು. ನಂತರ ದೇವಾಲಯ ರಚನೆ ಆರಂಭವಾಗಿದ್ದು ಕ್ರಿ.ಶ. ೧೩೫೬ರ ವೇಳೆಗೆ ಪೂರ್ಣಗೊಂಡಿರಬಹುದು. ಸಾಮ್ರಾಜ್ಯದ ಆರಂಭದಲ್ಲಿ ಹರಿಹರನು ತನ್ನ ಸೋದರರೊಂದಿಗೆ ಶೃಂಗೇರಿಗೆ ಆಗಮಿಸಿದ್ದಾನೆ. ಕ್ರಿ.ಶ. ೧೩೫೬ ರಲ್ಲಿ ಬುಕ್ಕನೂ ಶರಂಗೇರಿಗೆ ಭೇಟಿನೀಡಿ ದೇವಾಲಯಕ್ಕೆ ದಾನ ಧರ್ಮ ಕಾಣಿಕೆಗಳನ್ನು ಒಪ್ಪಿಸಿದ್ದಾನೆ. ಈ ದೇವಾಲಯ ಬದಲಾದ ವಾಸ್ತು ಪರಂಪರೆಗೆ ಒಂದು ಮೈಲುಗಲ್ಲು.

ಶೃಂಗೇರಿಯ ವಿದ್ಯಾಶಂಕರ ದೇವಾಲಯ ಕೆಂಪು ಬಣ್ಣ ಮಿಶ್ರಿತ ಗ್ರಾನೈಟ್ ಶಿಲೆಯಲ್ಲಿ ರೂಪುಗೊಂಡಿದ್ದು ತುಂಗಾ ನದಿಯ ದಡದಲ್ಲಿ ನಿಂತಿದೆ. ಹೊಯ್ಸಳರ ಕಾಲದಲ್ಲಿ ಬಳಕೆಗೊಳ್ಳುತ್ತಿದ್ದ ಬಳಪದ ಕಲ್ಲು ಈಗ ಕಾಣೆಯಗಿದೆ. ಈ ಮಾಧ್ಯಮದ ಬದಲಾವಣೆಯಿಂದ ರಚನೆಯ ಸ್ವರೂಪವೂ ಬದಲಾಗಿದೆ. ಹೊಯ್ಸಳರ ಕಾಲದಲ್ಲಿ ಗ್ರಾನೈಟ್ ಶಿಲೆಯ ರಚನೆ ಇಲ್ಲವೇ ಎಂದು ಪ್ರಶ್ನಿಸಿದಲ್ಲಿ ತಲಕಾಡಿನ ಕೀರ್ತಿನಾರಾಯಣ ಸಾಕ್ಷಿಯಾಗುತ್ತಾನೆ. ಈ ಕಠಿಣ ಶಿಲೆಯಲ್ಲಿ ಕುಸುರಿಯ ಕೆಲಸ ಸಾಧ್ಯವಿಲ್ಲ. ದೇವಾಲಯದ ಎತ್ತರವನ್ನು ಕೊಂಚ ಹಿಗ್ಗಿಸಬಹುದೇ ಹೊರತು ಕುಸುರಿಯ ಕೆಲಸವನ್ನಲ್ಲ. ಆದರೂ

ಹಲವೆಡೆ ಪ್ರಯತ್ನವಿದೆ. ಅಧಿಷ್ಠಾನ, ಪಾದ, ಪ್ರಸ್ತರದ ನಂತರ ಇಟ್ಟಿಗೆ ಮತ್ತು ಗಾರೆಯಲ್ಲಿ ರಚನೆ ಮುಂದುವರೆಯುತ್ತದೆ. ವಿದ್ಯಾಶಂಕರ ದೇವಾಲಯದಲ್ಲಿ ಹೊಯ್ಸಳರ ಕಾಲದ ರಚನೆಯಂತೆ ಜಗತಿಗೆ ಸಮನಾದ ಉಪಪೀಠವಿದ್ದು ಹೆಚ್ಚು ವಿಸ್ತಾರವಿಲ್ಲದಿದ್ದರೂ ಪ್ರದಕ್ಷಿಣೆ ಬರಲು ಸಾಧ್ಯವಿದೆ. ಉಪಪೀಠದ ಅಧಿಷ್ಠಾನ. ಉಪಪೀಠ ಹಾಗೂ ಅಧಿಷ್ಠಾನವನ್ನೊಳಗೊಂಡಂತೆ ಹಲವು ಹಂತಗಳಿವೆ. ಈ ಸ್ತರಗಳಲ್ಲಿ ಕುದುರೆಯ ಸಾಲು, ಆನೆಗಳ ಸಾಲು, ಸಿಂಹಗಳ ಸಾಲು ಪೌರಾಣಿಕ ಚಿತ್ರ ಪಟ್ಟಿಕೆಗಳಿವೆ. ಹೊಯ್ಸಳರ ಕಾಲದ ಸೋಮನಾಥಪುರದ ಕೇಶವ ದೇವಾಲಯದಲ್ಲಿ ಪಟ್ಟಿಕೆಗಳ ಸಾಲು ಗರ್ಭಗೃಹದಿಂದ ಮುಂದಿನ ಮಂಟಪ ರಚನೆಯವರೆಗೂ ಆವರಿಸಿ ದೇವಾಲಯವನ್ನು ಸುತ್ತುವರೆದಿದೆ. ಇಲ್ಲಿಯೂ ಅಂತಹ ಸಂದರ್ಭವನ್ನು ಕಾಣಬಹುದು. ಸೋಮನಾಥಪುರದಲ್ಲಿ ಪಟ್ಟಿಕೆಗಳು ಚಿಕ್ಕವು. ಅಗಾಧವಾದ ಕುಸುರಿ ಕೆಲಸವಿದೆ. ಇಲ್ಲಿ ಎತ್ತರಕ್ಕೆ ತಕ್ಕಂತೆ ಪಟ್ಟಿಕೆಗಳಿವೆ. ಪೀಠಾನಂತರ ಭಿತ್ತಿಯ ಆವರಣದಲ್ಲಿ ಮೂಲೆಗಳಲ್ಲಿ ಕಂಬಗಳ ಕಂಡರಣೆ ಇದೆ. ಅವುಗಳೊಂದಿಗೆ ದೇವತಾ ಮೂರ್ತಿಗಳನ್ನು ಕಂಡರಿಸಿದ್ದಾರೆ. ಭಿತ್ತಿಯ ಮೇಲ್ಗಡೆ ವಾದ್ಯ ಅಥವಾ ಮೊದಲ ಹಂತದ ಪ್ರಸ್ತರವು ಮುಂದಕ್ಕೆ ಬಾಗಿದೆ. ಈ ಬಾಗಿನ ಮೇಲೆ ದ್ವಾರ ಬಂಧದ ಸ್ಥಳದಲ್ಲಿ ಒಂದು ಜೊತೆ ಪುಷ್ಪಾಕಾರದ ಬೋದಿಗೆಯ ಮುಂಚಾಚು ಇದೆ. ಪ್ರಸ್ತರದ ಮೇಲಿನ ಹಂತದಲ್ಲಿ ಐಹೊಳೆಯ ಲಾಡ್‌ಖಾನ್ ದೇವಾಲಯದಂತೆ ದಿಂಡುಗಳನ್ನಿರಿಸಿದ್ದಾರೆ. ಶಿಖರವು ದುರ್ಗಾದೇವಾಲಯದಲ್ಲಿರುವಂತೆ ಗರ್ಭಗೃಹದ ಮೇಲೆ ರಚಿಸಲಾಗಿದೆ. ಶಿಖರದ ಮುಂದೆ ಶುಕನಾಸವಿದೆ. ಶಿಖರವು ಮೂರು ಹಂತಗಳಲ್ಲಿದ್ದು ಕೆಳಗಿನ ಭಿತ್ತಿಯಂತೆ ದೇವತಾ ವಿಗ್ರಹಗಳನ್ನು ಕಂಡರಿಸಿದ್ದಾರೆ. ಗರ್ಭಗೃಹ ಆಕಾರದಂತೆ ಶಿಖರ ರಚನೆ ಇದೆ. ಘಂಟಾ ಶಿಖರದ ಭದ್ರಭಾಗದಲ್ಲಿ ನಾಲ್ಕು ದಿಕ್ಕಿನಲ್ಲಿ ಪುಟ್ಟಕಲಶಗಳಿದ್ದು ಮಧ್ಯೆ ಮೇಲ್ತುದಿಯಲ್ಲಿ ಲೋಹದ ಕಲಶವಿದೆ. ಶುಕನಾಸದ ಭಾಗದಲ್ಲಿಯೂ ಪುಟ್ಟ ಕಲಶಾಕೃತಿ ಇದೆ. ಹೊಯ್ಸಳರ ಕಾಲದ ಶೈಲಿಯನ್ನು ಬಿಟ್ಟುಕೊಡಲಾಗದ ಕಣಶಿಲೆಯ ಅಪುರೂಪದ ದೇವಾಲಯ ಎನ್ನಿಸಿದೆ.

ದೇವಾಲಯದ ತಲವಿನ್ಯಾಸವು ಅಂಡಾಕೃತಿಯಲ್ಲಿದ್ದು ಗರ್ಭಗೃಹ, ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥ, ನವರಂಗ ಅಥವಾ ಮಂಟಪದ ರಚನೆ ಇದೆ. ದೇವಾಲಯಕ್ಕೆ ಆರು ದ್ವಾರಗಳಿದ್ದು ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಒಂದೊಂದು ಹಾಗೂ ಉತ್ತರ ದಕ್ಷಿಣಗಳಲ್ಲಿ ಎರಡೆರಡು ದ್ವಾರಗಳಿವೆ. ನವರಂಗದ ಸ್ತಂಭಗಳೊಂದಿಗೆ ಇವು ದಾಕ್ಷಿಣಾತ್ಯ ಸಂಪ್ರದಾಯವನ್ನು ಅನುಸರಿಸಿದೆ. ಹೊರಭಾಗದ ಭಿತ್ತಿಯಲ್ಲಿರುವ ಸ್ತಂಭಗಳ ಕಂಡರಣೆ ನೀಳವಾಗಿದ್ದು ಕೆಳಗೆ ಚತುರಶ್ರಾಕಾರವೆನಿಸಿ ದಂಡವು ಅಷ್ಟಾಶ್ರವಾಗಿದ್ದು ಮೇಲ್ಗಡೆ ವಿಷ್ಕಂಭದ ಸ್ತರಗಳಿವೆ. ಹೊಯ್ಸಳರ ಕಾಲದ ಶೈಲಿಯ ದೇವಾಲಯಗಳ ಅನುಕರಣೆ ಇದ್ದರೂ ದಾಕ್ಷಿಣಾತ್ಯ ಸಂಪ್ರದಾಯದೆಡೆಗೆ ವಾಲುತ್ತಿರುವುದನ್ನು ಕಾಣಬಹುದು. ಕನ್ನಡ

ನೆಲದಲ್ಲಿ ಚಾಲುಕ್ಯರ ನಂತರ ಹೊಯ್ಸಳರು ಪ್ರೋತ್ಸಾಹಿಸಿದಂತೆ ಆಂಧ್ರಪ್ರದೇಶದಲ್ಲಿ ಕಾಕತೀಯರು ವಾಸ್ತುಶೈಲಿಗಳನ್ನು ಬೆಳೆಸಿದರು. ವಿಜಯನಗರ ಸಾಮ್ರಾಜ್ಯ ವಿಸ್ತರಿಸಿದಂತೆ ದಾಕ್ಷಿಣಾತ್ಯ ಸಂಪ್ರದಾಯದ ಪ್ರಭಾವ ಆಂಧ್ರದಲ್ಲಿಯೂ ಪಸರಿಸಿತು. ತಾಡಪತ್ರಿಯ ದೇವಾಲಯದ ಸಮುಚ್ಚಯದಲ್ಲಿ ಮೃದುಶಿಲೆ ಬಳಕೆ ಇದೆ. ಇದೊಂದು ಅಪರೂಪದ ಉದಾಹರಣೆ. ಈ ಸಮುಚ್ಚಯದಲ್ಲಿ ಕಠಿಣ ಶಿಲೆಯ ಬಳಕೆ ಇದ್ದರೂ ಸೂಕ್ಷ್ಮ ಕೆತ್ತನೆಗೆ ಹೆಚ್ಚು ಒತ್ತು ಲಭಿಸಿದೆ. ಇದು ಹದಿನಾರನೇ ಶತಮಾನದ ರಚನೆ.

ವಿಜಯನಗರದ ಕಾಲದಲ್ಲಿ ಕಾಣುವ ವಾಸ್ತು ಶಿಲ್ಪ ಬೆಳವಣಿಗೆಯನ್ನು ಗುರುತಿಸುವ ಮುನ್ನ ಈ ನೆಲದ ಹಿಂದಿನ ಸಾಧನೆಯನ್ನು ಗಮನಿಸಬೇಕು. ನಮ್ಮ ನೆಲದಲ್ಲಿ ವಾಸ್ತುಶಿಲ್ಪದ ನೆರಿಗೆಗಳು ಮೂಡಿದ್ದು ಬಾದಾಮಿ ಚಾಲುಕ್ಯರ ಕಾಲದಲ್ಲಿ. ದೇವಾಲಯಗಳ ತೊಟ್ಟಿಲು ಎಂದು ಪ್ರಖ್ಯಾತಿಪಡೆದ ಐಹೊಳೆ, ಬಾದಾಮಿ ಮತ್ತು ಪಟ್ಟದ ಕಲ್ಲುಗಳಲ್ಲಿ ಗುಹಾಂತರ ದೇವಾಲಯಗಳಿಂದ ಸ್ವತಂತ್ರ ದೇವಾಲಯಗಳು ಗರಿಕೆದರಿ ದಾಕ್ಷಿಣಾತ್ಯ ಸಂಪ್ರದಾಯದ ನಾಗರ, ದ್ರಾವಿಡ, ನೇಸರ ಶೈಲಿಗಳು ಖಚಿತಗೊಂಡವು.

ಭುವನೇಶ್ವರದ ಪರಶುರಾಮೇಶ್ವರ ದೇವಾಲಯದ ನಂತರ ಈ ಸ್ಥಳಗಳಲ್ಲಿ ಕಾಣಿಸಿಕೊಂಡ ಕಳಿಂಗ ಶೈಲಿಯು ಔತ್ತರೇಯ ಸಂಪ್ರದಾಯದ ಬೆಳವಣಿಗೆಗೆ ಕಾರಣವಾಗಿತ್ತು. ಔತ್ತರೇಯ ಸಂಪ್ರದಾಯದಲ್ಲಿ ಈ ನೆಲದಲ್ಲಿ ಮುಂದುವರೆದದ್ದು ಔತ್ತರೇಯ ದ್ರಾವಿಡ ಅಥವಾ ನಾಗರಿಕ ದ್ರಾವಿಳ ಶೈಲಿ. ಇದಲ್ಲದೆ ಭೂಮಿಜ ಶೈಲಿಯ ಕೆಲವು ಉದಾಹರಣೆಗಳನ್ನು ಕಾಣಬಹುದು. ಔತ್ತರೇಯ ಮತ್ತು 'ದಾಕ್ಷಿಣಾತ್ಯ ಸಂಪ್ರದಾಯಗಳ ಸಂಗಮದಲ್ಲ ಒಡಮೂಡಿದ್ದು ನಾಗರೀಕ ದ್ರಾವಿಳ ಶೈಲಿ. ಅರಳಿದ ಈ ಶೈಲಿಯನ್ನು ಕಲ್ಯಾಣದ ಚಾಲುಕ್ಯರು ಮತ್ತು ಹೊಯ್ಸಳರು ಪೋಷಿಸಿದರು. ದಕ್ಷಿಣದ ತಮಿಳುನಾಡಿನಲ್ಲಿ ದಾಕ್ಷಿಣಾತ್ಯ ಸಂಪ್ರದಾಯ ಖಚಿತಗೊಂಡಿದ್ದು ಪಲ್ಲವರ ಕಾಲದಲ್ಲಿ. ಚೋಳರು ಈ ಸಂಪ್ರದಾಯವನ್ನು ಮುಂದುವರೆಸಿದರು.

ಬಾದಾಮಿ ಚಾಲುಕ್ಯರ ಕಾಲದಲ್ಲಿ ವಾಸ್ತು ಶಿಲ್ಪ ರಚನೆಗೆ ಮರಳುಗಲ್ಲನ್ನು ಬಳಸಿದ್ದಾರೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ತುಸು ಹಸಿರುಬಣ್ಣದ ಕೊಂಚ ಗಡುಸಾದ ಶಿಲೆಯ ಬಳಕೆ ಇದೆ. ಇವುಗಳಲ್ಲಿ ಸುಂದರ ಕಲೆ–ಕೃತಿಗಳು ಅರಳಲು ಸಾಧ್ಯ. ಹೊಯ್ಸಳರು ಮೃದುವಾದ ಬಳಪದ ಕಲ್ಲನ್ನು ಬಳಸಿದ್ದಾರೆ. ಶಿಲೆಯಲ್ಲಿ ಸೂಕ್ಷ್ಮ ಕೆತ್ತನೆ ಪರಾಕಾಷ್ಠೆಯನ್ನು ಮುಟ್ಟಿದ್ದು ಹೊಯ್ಸಳರ ಕಾಲದಲ್ಲಿ ತಮಿಳುನಾಡಿನ ಪಲ್ಲವರು ಮತ್ತು ಚೋಳರು ಬಳಸಿದ್ದು ಗ್ರಾನೈಟ್ ಅಥವಾ ಕರ್ಣಶಿಲೆ. ಇದು ಕಾಠಿಣ್ಯವುಳ್ಳದ್ದು. ಇವರು ಅನುಸರಿಸಿದ ದಕ್ಷಿಣಾತ್ಯ ಮಾರ್ಗವನ್ನು ನಮ್ಮ ನೆಲದ ದಕ್ಷಿಣ ಭಾಗದಲ್ಲಿ ಗಂಗರು, ನೊಳಂಬರು ಮುಂದುವರೆಸಿದರು. ಇವರು ತುಸು ಗಡುಸಾದ ಶಿಲೆಯನ್ನೇ ಬಳಸಿದ್ದಾರೆ. ಈ

ಸಂಪ್ರದಾಯದ ರಚನೆಗಳನ್ನು ಚಾಮರಾಜನಗರದ ನರಸಮಂಗಲ, ಮಂಡ್ಯ ಜಿಲ್ಲೆಯ ಕಂಬದ ಹಳ್ಳಿ, ಶ್ರವಣಬೆಳಗೊಳ, ನಂದಿ, ಕೋಲಾರ, ಆವನಿಗಳಲ್ಲಿ ಪ್ರಮುಖವಾಗಿ ಕಾಣಹುದು. ಹೊಯ್ಸಳರ ಕಾಲದಲ್ಲಿಯೂ ದಾಕ್ಷಿಣಾತ್ಯ ಸಂಪ್ರದಾಯದ ರಚನೆಗಳಿವೆ. ಆದರೆ ಸೀಮಿತವಾದದ್ದು. ಇವು ಮೇಲುಕೋಟೆ, ಕೊಂಡನೂರುಗಳಲ್ಲಿವೆ.

ವಿಜಯನಗರ ಕಾಲದಲ್ಲಿ ಮೇಲ್ಕಂಡ ಸ್ಥಳಗಳ ಪರಿಸರದಲ್ಲಿ ದಾಕ್ಷಿಣಾತ್ಯ ಸಂಪ್ರದಾಯದ ಅನುಸರಣೆಯಿಂದಾಗಿ ದೇವಾಲಯ ರಚನೆಗಳನ್ನು ಕಾಣಬಹುದು. ಹೊಯ್ಸಳರ ಕಾಲದ ದೇವಾಲಯಗಳಿರುವ ಸ್ಥಳದಲ್ಲಿ ದಾಕ್ಷಿಣಾತ್ಯ ಸಂಪ್ರದಾಯದ ದೇವವಾಲಯಗಳ ಬೆಳವಣಿಗೆ ಇಲ್ಲವೆಂದೇ ಗಮನಿಸಬಹುದು. ವಿಜಯನಗರದ ಕಾಲದಲ್ಲಿ ಕಠಿಣವಾದ ಗ್ರಾನೈಟ್ ಶಿಲೆಯನ್ನು ಬಳಸಿದ್ದಾರೆ. ಹೊಯ್ಸಳರ ಕಾಲದೊಂದಿಗೆ ಮೃದುಶಿಲೆಯ ಬಳಕೆ, ನವಿರಾದ ಕೆತ್ತನೆ ಮಾಯವಾಯಿತೆಂದೇ ತಿಳಿಯಬೇಕು. ಹಂಪೆ ವಿಜಯನಗರ ಸಾಮ್ರಜ್ಯದ ರಾಜಧಾನಿಯಾಗಿ, ಇಲ್ಲಿನ ವಾಸ್ತು ರಚನೆಗಳು ದಕ್ಷಿಣದ ಶಿಲ್ಪಿಗಳ ನೆರವಿನಿಂದ ಕೆತ್ತನೆಗೊಂಡು ಪ್ರತ್ಯೇಕ ಘಟಕವಾಗಿ ನಿಂತಿದೆ.

ವಿಜಯನಗರದ ಪೂರ್ವಕಾಲದಲ್ಲಿ ದೇವಾಲಯಗಳ ತಳವಿನ್ಯಾಸವು ಗರ್ಭಗೃಹ, ಅಂತರ್‍ಭಾಳ ಅಥವಾ ಸುಕನಾಸಿ, ನವರಂಗ ಅಥವಾ ಗೂಢಮಂಟಪ ಹಾಗೂ ಮುಖಮಂಟಪಗಳನ್ನು ಹೊಂದಿತ್ತು. ವಿಜಯನಗರ ಕಾಲದಲ್ಲಿ ಕೊಂಚ ಬದಲಾವಣೆಗಳನ್ನು ಕಾಣಬಹುದು. ಗರ್ಭಗೃಹ, ಅಂತರಾಳದ ನಂತರ ಅರ್ಧ ಮಂಟಪವಿದೆ. ನಂತರ ನವರಂಗಕ್ಕೆ ಸಮನಾದ ರಂಗಮಂಟಪವಿದೆ. ಇದರೊಂದಿಗೆ ಕೆಲವೆಡೆ ಮಹಾಮಂಟಪವನ್ನು ಸೇರಿಸಿದ್ದಾರೆ. ಗರ್ಭಗೃಹ, ಅಂತರಾಳ ಮತ್ತು ಅರ್ಧಮಂಟಪವನ್ನೊಳಗೊಂಡಂತೆ ಕೆಲವೆಡೆ ಪ್ರದಕ್ಷಿಣಾ ಪಥವಿದೆ. ಈ ಎಲ್ಲಾ ಬದಲಾವಣೆಗಳನ್ನೂ ನಿಯಮಿತವಾಗಿ ಪಾಲಿಸಿಲ್ಲ ಎಂದು ಗಮನಿಸಬಹುದು. ವಿಜಯನಗರ ಕಾಲದ ರಚನೆಗಳು ಮೊದಲಿದ್ದ ರಚನೆಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬೆಳದದ್ದೇ ಹೆಚ್ಚು. ಆದರೆ ಇವರ ಕಾಲದ ಪ್ರೋತ್ಸಾಹ ಅನನ್ಯವಾದುದು.

ಮುಳುಬಾಗಿಲಿನ ವಿಠ್ಠಲ, ಗುಡಿಪಲ್ಲಿಯ ಸೋಮೇಶ್ವರ, ದೇವರಗುಡಿಪಲ್ಲಿಯ ವೆಂಕಟರಮಣ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳದೊಂದಿಗೆ ಅರ್ಧಮಂಟಪ ಅಥವಾ ಮುಖಮಂಟಪವಿದೆ.

ತ್ರಯಂಬಕಪುರದ ಪ್ರಯಂಬಕೇಶ್ವರ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿಯನ್ನು ಸುತ್ತುವರೆದ ಪ್ರದಕ್ಷಿಣಾಪಥವಿದೆ. ಕಠಿಣಶಿಲೆಯ ಬಳಕೆಯಿಂದಾಗಿ ಭಿತ್ತಿಭಾಗದ ಅಲಂಕಾರ ಕುಂಠಿತಗೊಂಡಿತು. ಕಠಿಣಶಿಲೆಯ ತೂಕದಿಂದಾಗಿ ಮೇಲ್ಕಟ್ಟಡ ರಚನೆ ಇಟ್ಟಿಗೆ ಗಾರೆಯ ರಚನೆಗೆ ಹೆಚ್ಚು ಪ್ರಾಶಸ್ತ್ಯ ನೀಡಿತು. ವಿಜಯನಗರ ಕಾಲದ

ರಚನೆಗಳಲ್ಲಿ ಸ್ತಂಭಗಳಲ್ಲಿ ವೈವಿಧ್ಯತೆ ಹೆಚ್ಚಿತು. ಕಲ್ಯಾಣ ಮಂಟಪಗಳಲ್ಲಿ ವಿವಿಧ ರೀತಿಯ ಸ್ತಂಭಗಳು ಪ್ರದರ್ಶಿಸಲ್ಪಟ್ಟವು. ಭಿತ್ತಿಯ ಅಲಂಕಾರವು ಕೋಷ್ಠಪಂಜರ ಮತ್ತು ಕುಂಭಪಂಜರ ರಚನೆಗೆ ಸೀಮಿತವೆನಿಸಿತು. ವಿಜಯನಗರ ಪೂರ್ವಕಾಲದಲ್ಲಿ ತೋರಣಗಳು, ವೃತ್ತ ಸ್ಫಾ(ಸ್ಫು)ಟಿತ ರಚನೆಗಳು ಉಬ್ಬು ಶಿಲ್ಪಗಳಾಗಿ ಭಿತ್ತಿ ಮಧ್ಯದಲ್ಲಿ ಅಲಂಕರಿಸಲ್ಪಟ್ಟಿವೆ. ಇವನ್ನು ಶಾಸ್ತ್ರ ಗ್ರಂಥಗಳೂ ವಿವರಿಸಿವೆ. ವೃತ್ತಸ್ಫಾಟಿತವು ನೀಳವಾದ ಜೋಡಿ ಸ್ತಂಭಗಳನ್ನೊಳಗೊಂಡಿದ್ದು ಮೇಲ್ಗಡೆ ಕೂಟಾಕಾರ ಅಥವಾ ಶಾಲಾಕಾರ ಶಿಖರ ಮಾದರಿಯನ್ನೊಳಗೊಳ್ಳುತ್ತವೆ. ಸ್ತಂಭಗಳ ಮಧ್ಯೆ ದೇವತಾಮೂರ್ತಿಗಳನ್ನಿಡಲು ಸ್ಥಳವಿದೆ. ಕೆಲವೆಡೆ ದೇವತಾ ಮೂರ್ತಿಗಳಿಲ್ಲದೆ ಬರಿದಾಗಿದೆ. ಇವು ಅಧಿಷ್ಠಾನದ ಮೇಲೆ ಭಿತ್ತಿಭಾಗದಲ್ಲಿವೆ. ಇವು ಭದ್ರಭಾಗದಲ್ಲಿರುವುದರಿಂದ ಭದ್ರೋಪೇತವೆಂದೂ ಗುರುತಿಸುವುದುಂಟು. ವಿಜಯನಗರ ಕಾಲದ ರಚನೆಗಳಲ್ಲಿ ವೃತ್ತಸ್ಫಾಟಿತವು ಸ್ತಂಭಗಳ ಮಧ್ಯ ಕೊಂಚ ಆಳವಿರುವ ಗೂಡುಗಳಾಗಿ ಪರಿವರ್ತಿತವಾಗಿದ್ದು ಅಧಿಷ್ಠಾನದ ಮೇಲ್‌ಸ್ತರವನ್ನು ಕತ್ತರಿಸಿ ಜೋಡಿಸಲಾಗಿದೆ. ಇದನ್ನು ಕೋಷ್ಠಪಂಜರ ಎಂದು ಗುರುತಿಸುತ್ತಾರೆ. ಗುಡಿಪಲ್ಲಿಯ ಸೋಮೇಶ್ವರ ಹಾಗೂ ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಾಲಯಗಳ ಗರ್ಭಗೃಹದ ಹೊರಭಿತ್ತಿಯಲ್ಲಿ ಕೋಷ್ಠಪಂಜರಗಳನ್ನು ಗುರುತಿಸಬಹುದು.

ಕುಂಭ ಪಂಜರವು ವಿಜಯನಗರ ಕಾಲದಲ್ಲಿ ಸಂಪೂರ್ಣವಾಗಿ ಬೆಳವಣಿಗೆ ಹೊಂದಿದ ರಚನೆ. ಶಾಸ್ತ್ರಗ್ರಂಥಗಳಲ್ಲಿ ಕುಂಭಪಂಜರವೆನ್ನುವ ಉಲ್ಲೇಖವಿಲ್ಲದಿದ್ದರೂ ಮೂಲಸ್ವರೂಪದ ವಿವರಗಳನ್ನು ಶಾಸ್ತ್ರಗ್ರಂಥಗಳಲ್ಲಿ ಕಾಣಬಹುದು. ದಕ್ಷಿಣದ ತಮಿಳುನಾಡಿನ ದೇವಾಲಯಗಳಲ್ಲಿ ಚೋಳರ ಕಾಲದಲ್ಲಿ ಈ ರಚನೆಗಳನ್ನು ಭಿತ್ತಿಯ ಅಲಂಕರಣಕ್ಕೆ ಬಳಸಿದ್ದಾರೆ. ಕರ್ನಾಟಕದ ದೇವಾಲಯಗಳಲ್ಲಿ ವಿಜಯನಗರ ಕಾಲದಲ್ಲಿ ಕಾಣಬಹುದು. ಕುಂಭಪಂಜರದ ಮೂಲ ಸ್ವರೂಪದ ವಿವರ ಇಂತಿದೆ.

ಚಿತ್ರಕುಂಭಲತಾಪೂರ್ವಾಸ್ತಂಭಕುಂಭಲತಾಪರಾ
ಕುಂಭಕುಂಭಲತಾ ಅನ್ಯತಾಸಾಲಕ್ಷಣಮುಚ್ಯತೇ

ಶಾಸ್ತ್ರಗಳು ಗುರುತಿಸಿರುವ ಮಾದರಿಗಳನ್ನು ಗುರುತಿಸಲು ಸಾಧ್ಯವಾಗದು. ಹೊಯ್ಸಳ ಕಾಲದ ಭಿತ್ತಿಭಾಗದಲ್ಲಿ ತೋರಣದ ಮಧ್ಯದಲ್ಲಿ ನೀಳವಾದ ಸ್ತಂಭದ ಉಬ್ಬು ಕೆತ್ತನೆ ಇದ್ದು ಸ್ತಂಭ ಮೂಲದಲ್ಲಿ ಚಪ್ಪಟೆಯಾದ ಪೀಠವಿದೆ. ಸ್ತಂಭದ ಮೇಲ್ತುದಿಯಲ್ಲಿ ಕೂಟ ಅಥವಾ ಶಿಖರ ಮಾದರಿಗಳು ಅಲಂಕೃತಗೊಂಡಿವೆ. ಇದು ಕುಂಭಪಂಜರದ ವಿಸ್ತೃತ ರೂಪ ಎನ್ನಿಸಿದೆ. ವೃತ್ತಸ್ಫಾಟಿತವು ಎರಡು ಸ್ತಂಭಗಳ ರಚನೆಯಾದರೆ ಕುಂಭಪಂಜರವು ಒಂದು ಸ್ತಂಭದ ರಚನೆ. ತಮಿಳುನಾಡಿನ ರಚನೆಗಳಲ್ಲಿ ವೃತ್ತಸ್ಫಾಟಿತವು ಒಂದು ಸ್ತಂಭವನ್ನು

ಎರಡಾಗಿ ಸೀಳಿ ದೂರ ಸರಿಸಿ ರಚಿಸಿದ್ದಂತೆ ಕಾಣಬರುತ್ತದೆ. ತಿಮ್ಮಲಾಪುರದ ಗೋಪುರದ ಹೊರಭಿತ್ತಿಯಲ್ಲಿ ಕುಂಭಪಂಜರವಿದೆ. ಇಲ್ಲಿರುವ ಶಿವನ ದೇವಾಲಯದ ಗರ್ಭಗೃಹದ ಹೊರಭಿತ್ತಿಯಲ್ಲಿ ಕೋಷ್ಠಪಂಜರ ಹಾಗೂ ಕುಂಭಪಂಜರ ರನೆಗಳನ್ನು ಕಾಣಬಹುದು. ಮುಳುಬಾಗಿಲಿನ ವಿಠ್ಠಲ ಮಂದಿರದ ಗೋಪುರ ರಚನೆಯಲ್ಲಿಯೂ ಇವೆರಡರ ರಚನೆಗಳಿವೆ. ಇವು ಚೋಳರ ಕಾಲದಲ್ಲಿದ್ದ ಆಲಂಕಾರಿಕ ಸ್ವರೂಪ ಎಂದು ಸ್ಪಷ್ಟವಾಗಿ ಗುರುತಿಸಬಹುದು.

ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಕೆಲವೆಡೆ ಪ್ರಾಕಾರ ರಚನೆಯನ್ನು ಕಾಣಬಹುದು. ಈ ರಚನೆಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ ಲಭ್ಯ. ಉತ್ತಮ ಉದಾಹರಣೆಯಾಗಿ ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಾಲಯದ ಆವರಣವನ್ನು ಗುರುತಿಸಬೇಕು. ಸೋಮನಾಥಪುರದ ಪ್ರಸನ್ನಕೇಶವ, ಬೇಲೂರಿನ ಚನ್ನಕೇಶವ ದೇವಾಲಯಗಳಿಗೂ ಪ್ರಾಕಾರ ರಚನೆಗಳಿವೆ. ಪ್ರಾಕಾರ ರಚನೆಯಲ್ಲಿ ಮೊದಲಿಗೆ ಕೇವಲಭಿತ್ತಿಭಾಗವಿದ್ದು ತದನಂತರ ಆವೃತ ಮಂಟಪಗಳು ಅಥವಾ ಮೌಲಿಕಾ ಮಂಟಪವು ಸೇರಿಸಲ್ಪಟ್ಟವು. ಪ್ರಾಕಾರದೊಂದಿಗೆ ಜೋಡಿಸಲ್ಪಟ್ಟ ಪ್ರವೇಶದ್ವಾರಕ್ಕೆ ಗೋಪುರವೆಂದು ಹೆಸರು. "ಪುರದ್ವಾರಂತು ಗೋಪುರಂ"-ಇದು ಶಾಸ್ತ್ರೋಕ್ತಿ. ಊರಿನ ಪ್ರವೇಶದ್ವಾರಕ್ಕೆ ಗೋಪುರವೆಂದು ಹೆಸರು. ಇದನ್ನೇ ದೇವಾಲಯಗಳಿಗೂ ಅನ್ವಯಿಸಿದರು. ಗೋಪುರವೆಂದಲ್ಲಿ ಹಲವು ಅಂತಸ್ಸಿನ ಮೇಲಿನ ರಚನೆ ಇರಬೇಕೆಂಬ ನಿಯಮವಿಲ್ಲ. ದೊಡ್ಡಗದ್ದೆವಳ್ಳಿಯ ದೇವಾಲಯದಲ್ಲಿ ಪ್ರಾಕಾರವಿದೆ ಹಾಗೂ ಗೋಪುರವಿದೆ. ಈ ಪ್ರಾಕಾರದ ಮೂಲೆಗಳಲ್ಲಿ ಶಿಖರಗಳಿಂದ ಕೂಡಿದ ಪುಟ್ಟದೇವಾಲಯ ಮಾದರಿಗಳನ್ನು ಜೋಡಿಸಿದ್ದಾರೆ. ಇಲ್ಲಿ ಆವೃತ ಮಂಟಪಗಳಿಲ್ಲ. ಹೊಯ್ಸಳರ ಕಾಲದಲ್ಲಿ ಒಂದೇ ಒಂದು ಸುತ್ತು ಪ್ರಾಕಾರ ನಿರ್ಮಿಸುವುದು ಸಂಪ್ರದಾಯವೆನಿಸಿತ್ತು. ಇದಕ್ಕೆ ಅಪವಾದ ಎನ್ನಿಸುವಂತೆ ಹೊಯ್ಸಳರ ಕಾಲದಲ್ಲಿ ಕೊಂಡೆನೂರಿನಲ್ಲಿ ಎರಡು ಸಾಕಾರ ನಿರ್ಮಿಸಿದ್ದಾರೆ. ಆದರೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ಪ್ರಾಕಾರ ರಚನೆ ದಾಕ್ಷಿಣಾತ್ಯ ಸಂಪ್ರದಾಯದಿಂದ ಬಂದದ್ದು. ತೊಂಡನೂರಿನ ಈ ಪ್ರಾಕಾರಗಳಲ್ಲಿ ಮೌಲಿಕಾ ಮಂಟಪಗಳನ್ನು ರಚಿಸಿದ್ದಾರೆ. ಇವು ನೆಲಮಟ್ಟದಲ್ಲಿದ್ದು ನೀಳ ಸ್ತಂಭಗಳನ್ನು ಹೊಂದಿವೆ. ಈ ಸ್ತಂಭಗಳು ಪೀಠವಿಲ್ಲದ ರಚನೆಗಳು. ವಾಸ್ತು-ಗ್ರಂಥಗಳು ಈ ಸ್ತಂಭಗಳನ್ನು "ಮೂಲೇ ವಿನಾಸವಾಸ್ತಂಭಂ ಚಿತ್ರ ಸ್ಕಂಭ ಮುದೀರಿತಂ" ಎಂದು ಗುರುತಿಸುತ್ತದೆ. ಪೀಠವಿಲ್ಲದ ಸ್ತಂಭಗಳಿಗೆ ಚಿತ್ರಸ್ಕಂಭ ಎಂದು ಹೆಸರು. ವಿಜಯನಗರದ ಕಾಲದಲ್ಲಿ ಮಂಟಪಗಳಲ್ಲಿ ಈ ರೀತಿಯ ಸ್ತಂಭಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ತೊಂಡನೂರಿನಲ್ಲಿರುವ ಈ ರೀತಿಯ ಸ್ತಂಭಗಳು ಆಕರ್ಷಕವಾಗಿದ್ದು ಆರಂಭ ಹಂತವನ್ನು ಸೂಚಿಸಿವೆ. ದೊಡ್ಡಗದ್ದವಳ್ಳಿ ದೇವಾಲಯದ ಪ್ರವೇಶ ದ್ವಾರ ಅಥವಾ ಗೋಪುರವು ಅತಿಸರಳವಾದುದು.

ಅಧಿಷ್ಠಾನ, ಪಾದ, ಪ್ರಸ್ತರ ರಚನೆ ಇದ್ದು ಮೇಲ್ಕಟ್ಟವಿಲ್ಲ. ಇಂತಹ ಸರಳ ರಚನೆಗಳನ್ನು ಅಮೃತಾಪುರ, ಸೋಮನಾಥಪುರ, ತೊಂಡನೂರುಗಳಲ್ಲಿ ಕಾಣಬಹುದು. ಬೇಲೂರಿನಲ್ಲಿ ಪೂರ್ವದಿಕ್ಕಿನಲ್ಲಿ ಪ್ರಾಕಾರಕ್ಕೆ ಹೊಂದಿಕೊಂಡಂತೆ ಎರಡು ಪ್ರವೇಶ ದ್ವಾರಗಳಿವೆ. ದೇವಾಲಯದ ನೇರಕ್ಕಿರುವ ಪ್ರವೇಶ ದ್ವಾರವನ್ನು ವಿಜಯನಗರದ ಕಾಲದಲ್ಲಿ ಹರಿಹರನ ಪ್ರಧಾನಿ ಗುಂಡನು ಏಳು ನೆಲೆಯಾಗಿ ನಿರ್ಮಿಸಿದ. ಈ ರಚನೆಗೆ ಮುನ್ನ "ಮರದ ಬಾಗಿಲುವಾಡದ ಗೋಪುರ"ವಿತ್ತೆಂದು ತಿಳಿದುಬರುತ್ತದೆ. ಹರಿಹರದ ಹರಿಹರೇಶ್ವರ ದೇವಾಲಯಕ್ಕೆ ಸುವರ್ಣ ಕಳಶವುಳ್ಳ ಗೋಪುರವಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಒಂದು ಕಾಲಕ್ಕೆ ಇದೂ ಮರದ ರಚನೆ ಇರಬಹುದು. ಬೇಲೂರಿನಲ್ಲಿ ಆಗ್ನೇಯ ದಿಕ್ಕಿನಲ್ಲಿರುವ ಪ್ರವೇಶ ದ್ವಾರಕ್ಕೆ ಆನೆ ಬಾಗಿಲು ಎಂದು ಗುರುತಿಸುತ್ತಾರೆ. ದೇವರ ಉತ್ಸವ ಮೂರ್ತಿ ಈ ಬಾಗಿಲಿನಿಂದ ಹೊರತರುವುದು ಹೆಚ್ಚು ರೂಢಿಯಲ್ಲಿದೆ. ಹೊಯ್ಸಳರ ಕಾಲದ ಮೇಲ್ಕಟ್ಟಡವಿರುವ ಗೋಪುರ ರಚನೆ ಇಂದು ಅಲಭ್ಯ. ವಿಜಯನಗರ ಕಾಲದ ಗೋಪುರ ರಚನೆಗೆ ನಾಗಮಂಗಲದ ಕೇಶವ, ತಿಮ್ಮಲಾಪುರದ ಗೋಪಾಲಕೃಷ್ಣ, ಕೋಲಾರದ ಸೋಮೇಶ್ವರ, ಮುಳುಬಾಗಿಲಿನ ವಿಠ್ಠಲ, ತೆರಕಣಾಂಬಿಯ ವರದರಾಜ ದೇವಾಲಯಗಳನ್ನು ಹೆಸರಿಸಬಹುದು. (ಕ್ರಿ.ಶ. ೧೩೧೩ರ ದೆಹಲಿಯ ಸುಲ್ತಾನ ದಾಳಿಗೆ ಹೆಚ್ಚಾಗಿ ಸಲುಗಿದ್ದ ತಮಿಳುನಾಡಿನ ಶ್ರೀರಂಗಂ ದೇವಾಲ. ಈ ದಾಳಿಯಿಂದಾಗಿ ಇಲ್ಲಿನ ದೇವಾಲಯಗಳು ಮುಚ್ಚಿದ್ದು ದೇವರ ಕೈಂಕರ್ಯಗಳು ನಡೆಯದೆ ಮೌನ ಆವರಿಸಿತು. ಸುಮಾರು ೫೦-೬೦ ವರ್ಷಗಳ ಕಾಲ ಯಾವ ಚಟುವಟಿಕೆಗಳೂ ಇಲ್ಲದೆ ಸ್ತಬ್ಧವಾಗಿತ್ತು. ವಿಜಯನಗರದ ಅರಸರ ಪ್ರವೇಶದಿಂದ ದೇವಾಲಗಳು ಪುನಶ್ಚೇತನಗೊಂಡು ದೇವರ ಕೈಂಕರ್ಯಗಳು ಆರಂಭವಾದವು. ಕ್ರಿ.ಶ. ೧೩೭೧ ರಲ್ಲಿ ಬುಕ್ಕನು ರಂಗನಾಥಸ್ವಾಮಿ ದೇವಾಲಯದ ಪುನಶ್ಚೇತನಕ್ಕೆ ಆಜ್ಞೆ ಮಾಡಿದ. ದೇವಾಲಯದ ನಿರ್ವಹಣೆಗಳಾಗಿ ದಾನಗಳನ್ನು ನೀಡಿದ. ಶ್ರೀರಂಗ ಸಮುಚ್ಚಯದಲ್ಲಿರುವ ಶೇಷರಾಯರ್ ಮಂಟಪ ವಿಜಯನಗರದ ಅರಸರ ಕಾಲದ ರಚನೆ. ತಮಿಳುನಾಡಿನಲ್ಲಿ ಹಲವು ಪ್ರಾಕಾರಗಳುಳ್ಳ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿವೆ. ಅತಿ ಎತ್ತರವಾದ ಗೋಪುರಗಳನ್ನು ನಿರ್ಮಿಸುವ ಸಂಪ್ರದಾಯ ವಿಜಯನಗರದ ಕಾಲದಿಂದ ಆರಂಭವಾಯಿತು. ಇವನ್ನು ರಾಯಗೋಪುರವೆಂದು ಕರೆಯುತ್ತಾರೆ. ರಾಯಗೋಪುರವೆಂದರೆ ಕೃಷ್ಣದೇವರಾಯನ ಗೋಪುರವೇ.

ಕ್ರಿ.ಶ. ೧೫೧೬-೧೭ ರಲ್ಲಿ ಕೃಷ್ಣದೇವರಾಯ, ಕಂಚಿ, ತಿರುವಣ್ಣಾಮಲೈ, ಚಿದಂಬರಂಗಳಿಗೆ ಭೇಟಿನೀಡಿದ ಹಲವು ದಾನಧರ್ಮಗಳೊಂದಿಗೆ ಎತ್ತರವಾದ ಗೋಪುರಗಳ ನಿರ್ಮಾಣಕ್ಕೆ ಕಾರಣನಾದ. ಚಿದಂಬರಂ ದೇವಾಲಯದ ಉತ್ತರದಿಕ್ಕಿನ ಗೋಪುರವನ್ನು ಏಳು ನೆಲೆಗಳಿಂದ ಹದಿನಾರು ನೆಲೆಗಳಿಗೆ ವಿಸ್ತರಿಸಿದ. ಇಲ್ಲಿ

ಕೃಷ್ಣದೇವರಾಯನ ವಿಗ್ರಹವಿದೆ. ಕಂಚಿಯ ವರದರಾಜಸ್ವಾಮಿ ದೇವಾಲಯವನ್ನು ಸಂದರ್ಶಿಸಿದಾಗ ದೇವಾಲಯುದ ಶಿಬಿರಕ್ಕೆ ಚಿನ್ನದ ತಗಡನ್ನು ಹೊದೆಸಿದ, ಶಿಲಾಶಿಖರವಿರುವ ಈ ದ್ವಿತಲ ರಚನೆಗೆ ಪುಣ್ಯಕೋಟಿ ವಿಮಾನವೆಂಬ ಹೆಸರಿದೆ. ಈ ದೇವಾಲಯದ ಸಮುಚ್ಚಯದಲ್ಲಿರುವ ತುಲಾಭಾರ ಮಂಟಪವು ಅಚ್ಯುತರಾಯನ ಕಾಲದಲ್ಲಿ ನಿರ್ಮಿಸಲಾಯಿತು. ಕಲ್ಯಾಣ ಮಂಟಪ, ವಸಂತ ಮಂಟಪ, ವಾಹನ ಮಂಟಪಗಳೂ ವಿಜಯನಗರ ಕಾಲದ ನಿರ್ಮಾಣಗಳು. ಇಲ್ಲಿಯ ಏಕಾಂಮ್ರೇಶ್ವರ ದೇವಾಲಯದ ಗೋಪುರವು ಕೃಷ್ಣದೇವರಾಯನ ಕಾಲದ ನಿರ್ಮಾಣ. ವರದಸ್ವಾಮಿ ದೇವಾಲಯದಲ್ಲಿ ಅಚ್ಯುತರಾಯನ ಕಾಲದ ವರ್ಣಚಿತ್ರಗಳಿವೆ. ತಮಿಳುನಾಡಿನಲ್ಲಿ ದೇವಾಲಯಗಳ ಕಟ್ಟಡ ನಿರ್ಮಾಣಕ್ಕಿಂತ, ದೇವಾಲಯ ನಿರ್ವಹಣೆಗೆ ವಿಜಯನಗರ ಅರಸರ ಕಾಲದಲ್ಲಿ ಹೆಚ್ಚಿಗೆ ಗಮನನೀಡಿದರು ಎಂದು ಗುರುತಿಸಬಹುದು.

ಆಂಧ್ರಪ್ರದೇಶದ ವಿಜಯನಗರದ ಅರಸರ ಕಾಲದ ದೇವಾಲಯಗಳಲ್ಲಿ ಹೆಚ್ಚಿನವು ಚೋಳರ ಕಾಲದ ದೇವಾಲಯಗಳ ಪ್ರಭಾ ವಲಯದಲ್ಲಿ ಬೆಳೆದವು. ಕದರಿ, ಲೇಪಾಕ್ಷಿ, ಪುಷ್ಪಗಿರಿ, ಉದಯಗಿರಿ, ಮಾರ್ಕಾಪುರ, ಜೆಟ್‌ಪ್ರೋಲು ಮಂಚಾಲಕಟ್ಟಗಳಲ್ಲಿರುವ ದೇವಾಲಯಗಳನ್ನು ಈ ಸಾಲಿನಲ್ಲಿ ಗುರುತಿಸಬಹುದು. ತಾಡಪತ್ರಿಯ ರಾಮಲಿಂಗೇಶ್ವರ ಹಾಗೂ ವೆಂಕಟರಮಣ ದೇವಾಲಯಗಳು ವಿಭಿನ್ನರೀತಿಯವು. ಇವೆರಡೂ ೧೬ನೇ ಶತಮಾನದ ರಚನೆಗಳು. ಈ ರಚನೆಗಳಲ್ಲಿ ಕಾಕತೀಯರ ಕಾಲದ ವಾಸ್ತು ರಚನೆಗಳ ಪ್ರಭಾವವಿದೆ. ಆಂಧ್ರದಲ್ಲಿರುವ ವಿಜಯನಗರ ಕಾಲದ ರಚನೆಗಳಲ್ಲಿ ಇವೆರಡನ್ನೂ ಅತ್ಯಂತ ಮಹತ್ವದ ದೇವಾಲಯಗಳೆಂದು ಪರಿಗಣಿಸುಬಹುದು. ಇತರ ವಿಜಯನಗರದ ಕಾಲದ ದೇವಾಲಯಗಳ್ಲಲಿ ಕಠಿಣ ಶಿಲೆಯನ್ನು ಬಳಸಿದರೆ, ಈ ದೇವಾಲಯದ ಸಂಕೀರ್ಣದಲ್ಲಿರುವ ಪಾರ್ವತಿ ಮತ್ತು ಶ್ರೀರಾಮನ ದೇವಾಲಯ ರಚನೆಯಲ್ಲಿ ಮೃದು ಶಿಲೆಯನ್ನು ಬಳಿಸದ್ದಾರೆ. ಇವೆರಡೂ ದೇವಾಲಯಗಳಿಗೆ ಗರ್ಭಗೃಹ, ಅಂತರಾಳಗಳಿದ್ದು ಎರಡೂ ದೇವಾಲಯಕ್ಕೆ ಒಂದೇ ರಂಗಮಂಟಪವಿದೆ. ಈ ದೇವಾಲಯಗಳ ಕೆತ್ತನೆ ಸೂಕ್ಷ್ಮ ರೀತಿಯದು. ಪಾರ್ವತಿ ದೇವಾಲಯಕ್ಕೆ ಶಾಲಾ ಶಿಖರವಿದೆ. ಈ ದೇವಾಲಯಗಲ್ಲಿ ಕೋಷ್ಠಪಂಜರ ಹಾಗೂ ಕುಂಭ ಪಂಜರ ರಚನೆಗಳಿವೆ. ಈ ಸಮುಚ್ಚಯದಲ್ಲಿ ಕಾಣಬರುವ ಈ ಆಲಂಕಾರಿಕ ರಚನೆಗಳು ವೈವಿಧ್ಯಮಯವಾದದ್ದು. ವೆಂಕರಮಣ ದೇವಾಲಯಕ್ಕೆ ಸೇರಿದ ಅಮ್ಮನವರ ದೇವಾಲಯದ ಹೊರ ಭಿತ್ತಿಯಲ್ಲಿ ಕುಂಭಪಂಜರ ರಚನೆಗಳು ಆಳೆತ್ತರವಿದ್ದು ಅಧಿಷ್ಠಾನದ ಉಪಾನದಿಂದ ಭಿತ್ತಿಯ ಅಂಚಿನವರೆಗೆ ಎತ್ತರಿಸಿವೆ. ಎತ್ತರ ಹೆಚ್ಚಿದಂತೆ ಅಲಂಕರಣವೂ ಹೆಚ್ಚು. ಅಧಿಷ್ಠಾನದ ರಚನೆಯಲ್ಲಿ ಮೂರು ಸ್ತರಗಳಿದ್ದು ಪಟ್ಟಿಕೆಗಳಂತೆ ತೋರುತ್ತದೆ. ವೆಂಕಟರಮಣ ದೇವಾಲಯದ ಗರ್ಭಗೃಹದ ಭಿತ್ತಿಯಲ್ಲಿ ಮೂರು ಕಡೆಯೂ ವಿಶೇಷವೆನಿಸುವ ಕುಂಭಪಂಜರ ರಚನೆಗಳನ್ನು ಕಾಣಬಹುದು.

ರಾಮಲಿಂಗೇಶ್ವರ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ರಂಗಮಂಟಪವಿದ್ದರೆ, ವೆಂಕರಮಣ ದೇವಾಲಯದಲ್ಲಿ ಅಂತರಾಳದ ನಂತರ ಅರ್ಧಮಂಪಟವೂ ಇದೆ. ರಂಗಮಂಟಪದಲ್ಲಿ ಎತ್ತರವಾದ ಸ್ತಂಭಗಳಿದ್ದು ವೆಂಕರಮಣ ದೇವಾಲಯದ ಛಾವಣಿಯಲ್ಲಿ ವರ್ಣಚಿತ್ರಗಳಿವೆ. ರಾಮಲಿಂಗೇಶ್ವರ ದೇವಾಲಯದ ಪಶ್ಚಿಮದ ಗೋಪುರದಲ್ಲಿ ವಿಜಯನಗರ ಅರಸರ ರಾಜ ಲಾಂಛನವನ್ನೂ ಕಂಡರಿಸಿದ್ದಾರೆ.

ಪುಷ್ಪಗಿರಿಯ ಚನ್ನಕೇಶವ ಮತ್ತು ಒಂಟಿಮಟ್ಟದಲ್ಲಿರುವ ಕೋದಂಡ ರಾಮ ದೇವಾಲಯಗಳಿಗೆ ಐದು ನೆಲೆಯ ಗೋಪುರಗಳಿವೆ. ಕಾಳಹಸ್ತಿಯಲ್ಲಿರುವ ಗೋಪುರ ರಚನೆ ಕೃಷ್ಣದೇವರಾಯನ ಕಾಲದ್ದು. ತಾಡಪತ್ರಿಯ ದೇವಾಲಯಗಳ ಸೂಕ್ಷ್ಮ ಕೆತ್ತನೆಗಳು, ಹೊಯ್ಸಳ ಹಾಗೂ ಕಾಕತೀಯರ ಕಾಲದ ರಚನೆಗಳನ್ನು ನೆನಪಿಸುವಂಥದ್ದು. ತಿರುಮಲ ತಿರುಪತಿಯಲ್ಲಿ ವಿಜಯನಗರ ಕಾಲದ ಪ್ರಮುಖ ರಚನೆಗಳಿಲ್ಲ. ಕುಮಾರ ಕೆಂಪಣ್ಣನಿಂದ ಸದಾಶಿವರಾಯನ ಕಾಲದವರೆಗೆ ಅಧಿಕ ಶಾಸನಗಳಿವೆ. ಇವರು ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿ ನಿತ್ಯ ಸೇವೆಗಳು ಚಾಚೂ ತಪ್ಪದಂತೆ ನಡೆಯಲು ಹೆಚ್ಚು ಗಮನ ನೀಡಿದರು. ವಿಜಯನಗರದ ಅರಸರ ಕಾಲವನ್ನು ಹಿಂದೂ ಧರ್ಮದ ಪುನರುತ್ಥಾನ ಕಾಲವೆಂದೇ ಬಣ್ಣಿಸಲಾಗಿದೆ. ಅಚ್ಯುತರಾಯನಿಗೆ ಕ್ರಿ.ಶ. ೧೫೨೯ ರಲ್ಲಿ ತಿರುಪತಿಯಲ್ಲಿ ಪಟ್ಟಾಭಿಷೇಕವಾಯಿತೆಂದು ಉಲ್ಲೇಖವಿದೆ. ಈ ಪ್ರದೇಶದಲ್ಲಿ ದೇವರಾಯನ ಕಾಲದಲ್ಲಿ ಹೆಚ್ಚು ಭೂಮಿಕಾಣಿಗಳು ದೇವಾಲಯದ ಒಡೆತನದಲ್ಲಿತ್ತು. ಶ್ರೀಭಂಡಾರದ ದ್ರವ್ಯವು ವ್ಯವಸಾಯ ಅಭಿವೃದ್ಧಿ ಕಾರ್ಯಕ್ಕೂ ಬಳಕೆಯಾಗುತ್ತಿತ್ತು. ತಿರುಪತಿ ದೇವಾಲಯದಲ್ಲಿ ಕೃಷ್ಣದೇವರಾಯ ಮತ್ತು ಅವನ ಇಬ್ಬರು ರಾಣಿಯರ ವಿಗ್ರಹಗಳಿವೆ.

ವಿಜಯನಗರ ಕಾಲದ ದೇವಾಲಯಗಳ ಸಮುಚ್ಚಯದಲ್ಲಿ ಕಂಡುಬರುವ ಮಂಟಪಗಳು ಹಲವಾರು ರೀತಿಯದು. ಪ್ರಾಕಾರಕ್ಕೆ ಹೊಂದಿಕೊಂಡಂತೆ ಆವೃತ ಮಂಟಪಗಳು, ಅಭಿಷೇಕ ಮಂಟಪ, ಉತ್ಸವ ಮಂಟಪ, ವಸಂತ ಮಂಟಪ ತುಲಾಭಾರ ಮಂಟಪ, ಉಯ್ಯಾಲೆ ಮಂಟಪ, ನಂದಿ ಮಂಟಪ, ಗರುಡ ಮಂಟಪ, ಯಾಗ ಮಂಟಪ ಹೀಗೆ ಹತ್ತಾರು ರೀತಿಯಲ್ಲಿ ಬೆಳೆದವು. ಇದಕ್ಕೆ ಕಾರಣವನ್ನು ಊಹಿಸಬಹುದು. ಗ್ರಾನೈಟ್ ಶಿಲೆಯಿಂದಾಗಿ ಶಿಲೆಯನ್ನು ಬಳಸಿ, ಎತ್ತರವನ್ನು ಅಧಿಷ್ಠಾನ, ಪಾದ, ಪ್ರಸ್ತರಗಳಿಗೆ ಮಾತ್ರ ವಿಸ್ತರಿಸಿದ್ದು ಮೇಲ್ಗಡೆ ಇಟ್ಟಿಗೆ, ಗಾರೆಯನ್ನು ಬಳಸಿದರು. ಕಲ್ಲಿನ ರಚನೆಯನ್ನು ಹೆಚ್ಚು ಎತ್ತರಕ್ಕೆ ಏರಿಸದೆ ಮಂಟಪದ ರಚನೆಗೆ ಹೆಚ್ಚು ಗಮನ ಕೊಟ್ಟು ವಿಸ್ತರಿಸಿದರು. ತಮಿಳುನಾಡಿನಲ್ಲಿ ನೂರು ಕಂಬಗಳ ಮಂಟಪ, ಸಾವಿರ ಕಂಬಗಳ ಮಂಟಪ ರಚನೆ ಇದೆ. ಆದರೆ ಈ ಸ್ತಂಭ ರಚನೆಯಲ್ಲಿ ಕಲಾತ್ಮಕತೆ ಇಲ್ಲ. ವಿಜಯನಗರ ಕಾಲದಲ್ಲಿ ಕಲ್ಯಾಣ ಮಂಟಪಗಳ ರಚನೆ ವಿಶೇಷವೆನ್ನಿಸಿತು. ಎತ್ತರವಾದ ಅಧಿಷ್ಠಾನದ ಮೇಲೆ

ರಚಿಸಿದ ಈ ಮಂಟಪದ ಸ್ತಂಭಗಳು ಕಲಾತ್ಮಕವಾದವು. ಎತ್ತರವಾದ ಸ್ತಂಭಗಳನ್ನು ಹೊಂದಿದೆ. ಚಿತ್ರ ಸ್ಕಂಭಗಳೂ, ಸಂಯುಕ್ತ ಸ್ತಂಭಗಳೂ ಕಲ್ಯಾಣ ಮಂಟಪದ ವೈಶಿಷ್ಟ್ಯವೆನಿಸಿದೆ. ಮಂಟಪದ ಮಧ್ಯೆ ತುಸು ಎತ್ತರವಾದ ವೇದಿಕೆ ಇದ್ದು, ನಾಲ್ಕು ಕಡೆಗಳಲ್ಲಿನ ಸ್ತಂಭಗಳು ಮತ್ತಷ್ಟು ಕುಸುರಿ ಕೆತ್ತನೆಯನ್ನು ಹೊಂದಿವೆ. ಕೆಲವೊಮ್ಮೆ ಈ ಸ್ತಂಭಗಳನ್ನು ಕರಿಯ ಶಿಲೆಯಿಂದ ರಚಿಸಿರಲು ಸಾಧ್ಯ. ಪೀಠವಿಲ್ಲದ ಚಚ್ಚೌಕದ ಸ್ತಂಭಗಳೇ ಅಧಿಕ. ಸ್ತಂಭಗಳ ಮೇಲೆ ದೇವಾನುದೇವತೆಗಳ ಉಬ್ಬುಶಿಲ್ಪವಿದೆ. ಮಧ್ಯೆ ಮಧ್ಯೆ ಅಷ್ಟ ಮುಖಗಳನ್ನೂ ಬೋಳುತನವನ್ನೂ ಪರಿಹರಿಸಲು ರಚಿಸಿದ್ದಾರೆ. ಮಂಟಪದ ಒಳಭಾಗದಲ್ಲಿ ಚಿತ್ರಸ್ಕಂಭಗಳಿದ್ದರೆ ಅಂಚಿನಲ್ಲಿ ಸಂಯುಕ್ತ ಸ್ತಂಭಗಳಿವೆ. ಇವನ್ನು ಜೋಡಿಸ್ತಂಭಗಳೆಂದೂ ಗುರುತಿಸುತ್ತಾರೆ. ಈ ಸ್ತಂಭಗಳಲ್ಲಿ ಮೂಲಸ್ತಂಭಕ್ಕೆ ಹೊಂದಿಕೊಂಡಂತೆ ಕಿರುಗಂಭವನ್ನು ಜೋಡಿಸಲಾಗಿದೆ. ಈ ಕಿರುಗಂಭಗಳನ್ನು ಉಪಪಾದಗಳೆನ್ನುತ್ತಾರೆ. ಇದಲ್ಲದೆ ಉಪಪಾದಗಳಿಗೆ ಪರ್ಯಾಯವಾಗಿ ಕುದುರೆ, ಯಾಳಿ, ಸಿಂಹಗಳನ್ನು ಜೋಡಿಸುತ್ತಾರೆ. ಈ ಪ್ರಾಣಿಗಳು ಆಳೆತ್ತರ ರಚನೆಗಳು. ಕುದುರೆಗಳು ಮುಂಗಾಲುಗಳನ್ನೆತ್ತಿ ಯುದ್ಧಕ್ಕೆ ಧಾವಿಸುವಂತೆ ರಚನೆಗೊಂಡಿವೆ. ಈಕುದುರೆಗಳ ಮೇಲೆ ಸವಾರರು. ಕೆಳಗೆ ಸೈನಿಕರೂ ಇತರ ಪುರುಷರನ್ನು ಕಾಣಬಹುದು. ಕಠಿಣ ಶಿಲೆಯಲ್ಲಿ ನಿರ್ಮಿತವಾದ ಈ ಶಿಲ್ಪಗಳೂ ಗಾತ್ರದಲ್ಲಿ ಸ್ತಂಭಕ್ಕೆ ತಕ್ಕಂತೆ ಸೌಷ್ಠವವನ್ನು ಹೊಂದಿದೆ.

ಈ ಸ್ತಂಭಗಳ ತುದಿಯಲ್ಲಿ ಬೋದಿಗೆಗಳು ಹೆಚ್ಚು ಮುಂಬಾಗಿದ್ದು ತುದಿಯಲ್ಲಿ ಅರ್ಧ ಮೊಗ್ಗಿನಾಕಾರವಿದೆ. ಇದನ್ನು ಪುಷ್ಪಬೋದಿಗೆ ಎಂದು ಕರೆದಿದ್ದಾರೆ. ವಾಸ್ತು ಗ್ರಂಥಗಳು ಇದನ್ನು ಪದ್ಮ ಮುಕುಳಾಕಾರ ಬೋದಿಗೆ ಎಂದು ಗುರುತಿಸಿವೆ. ಸ್ತಂಭಗಳ ಮೇಲ್ಭಾಗದಲ್ಲಿ ಪ್ರಸ್ತರ ರಚನೆ ಇದ್ದು ಇದರ ಮುಂಭಾಗ ಮಂಟಪದ ಆವರಣವನ್ನು ರಕ್ಷಿಸುತ್ತದೆ. ಪ್ರಸ್ತರದ ಮೇಲ್‌ಸ್ತರವು ಇಟ್ಟಿಗೆಯಿಂದ ರಚಿಸಲ್ಪಡುವ ಕೈಪಿಡಿಗೋಡೆಗೆ ಆಧಾರವಾಗಿದೆ. ಕಲ್ಯಾಣ ಮಂಟಪಗಳು ಸಾಮಾನ್ಯವಾಗಿ ದೇವಾಲಯದ ಆವರಣದಲ್ಲಿ ನೈರುತ್ಯ ದಿಕ್ಕಿನಲ್ಲಿ ರಚನೆಗೊಳ್ಳುತ್ತವೆ.

ವಿರೂಪಾಕ್ಷಪುರದ ಪ್ರಸನ್ನ ವಿರೂಪಾಕ್ಷ ದೇವಾಲಯ. ಅನಂತಶಯನ ಗುಡಿಯ ಅನಂತಶಯನ ದೇವಾಲಯ ಇವುಗಳ ಕಲ್ಯಾಣ ಮಂಟಪಗಳು ಅತಿ ಸರಳ ರಚನೆಗಳು. ಕಮಲಾಪುರದ ರಘುನಾಥ ದೇವಾಲಯದ ಕಲ್ಯಾಣ ಮಂಟಪದಲ್ಲಿ ಉಪಪಾದವುಳ್ಳ ಸಂಯುಕ್ತ ಸ್ತಂಭಗಳಿವೆ. ಕೋಲಾರದ ಸೋಮೇಶ್ವರ ದೇವಾಲಯದ ಕಲ್ಯಾಣ ಮಂಟಪದಲ್ಲಿ ಯಾಳಿ ಅಥವಾ ಸಿಂಹರಚನೆಗಳೂ. ಅಂಜಲೀ ಹಸ್ತದೊಡನೆ ಸ್ಥಾನಕ ಭಂಗಿಯಲ್ಲಿರುವ ಸ್ತ್ರೀವಿಗ್ರಹಗಳೂ ಕಡೆಯಲ್ಪಟ್ಟಿವೆ. ಶ್ರೀರಂಗಂನಲ್ಲಿರುವ ಶೇಷರಾಯನ್ ಮಂಟಪವೂ. ಕಲ್ಯಾಣ ಮಂಟಪಗಳಂತೆ ಆಕರ್ಷಣೀಯ ಸ್ತಂಭಗಳನ್ನು ಹೊಂದಿದೆ. ಈ ಮಂಟಪದ

ಸಂಯುಕ್ತ ಸ್ತಂಭಗಳಲ್ಲಿ ಸಮರಕ್ಕೆ ಹೊರಟ ಅಶ್ವಾರೋಹಿಗಳನ್ನೂ, ಮುಂಗಾಲುಗಳನ್ನೆತ್ತಿ ನಿಂತ ಅಶ್ವಗಳನ್ನೂ ಅದರಡಿಯಲ್ಲಿ ನಿಂತ ಯೋಧ ಪುರುಷರನ್ನೂ ಚಿತ್ರಿಸಿದೆ. ಅಶ್ವಗಳ ಗಾತ್ರ ಹಾಗೂ ಭಂಗಿ ರೋಚಕವಾದುದು. ವಿಜಯನಗರೋತ್ತರ ಕಾಲದಲ್ಲಿಯೂ ಕಲ್ಯಾಣ ಮಂಟಪಗಳು ಹಾಗೂ ಸ್ತಂಭರಚನೆಗಳು ದಕ್ಷಿಣ ಭಾರತದಲ್ಲಿ ವಿಜೃಂಭಿಸಿದವು.

ಬೇಲೂರಿನ ಚನ್ನಕೇಶವ ದೇವಾಲಯದ ಆವರಣದಲ್ಲಿರುವ ದೇವಾಲಯಗಳನ್ನು ಹೊರತುಪಡಿಸಿ ಉಳಿದೆಲ್ಲವೂ, ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ರಚನೆಗಳು. ಕ್ರಿ.ಶ. ೧೩೯೭ ರಲ್ಲಿ ಗುಂಡದಂಡಾಧಿಪನು ಗೋಪುರ ನಿರ್ಮಿಸಿದ್ದನ್ನು ಗುರುತಿಸಲಾಗಿದೆ. ದೀಪಸ್ತಂಭವು ಕ್ರಿ.ಶ. ೧೪೧೫ರ ರಚನೆಯಾಗಿದ್ದು, ಯಾಗ ಶಾಲೆಯು ಕ್ರಿ.ಶ. ೧೪೮೪ರ ಜೋಡಣೆಯಾಗಿದೆ. ಗರುಡದೇವರ ಆಲಯವು ಕ್ರಿ.ಶ. ೧೫೬೬ ರಲ್ಲಿ, ಬಲಿಪೀಠವು ಕ್ರಿ.ಶ. ೧೬೯೬ ರಲ್ಲಿ ಮತ್ತು ಉಯ್ಯಾಲೆ ಮಂಟಪವು ಕ್ರಿ.ಶ. ೧೫೮೦ ರಲ್ಲಿ ವಿಜಯನಗರೋತ್ತರ ಕಾಲದ ರಚನೆಗಳಾಗಿ ಸೇರ್ಪಡೆಗೊಂಡವು. ಗುಂಡದಂಡನಾಯಕನ ಕಾಲದಲ್ಲಿ ಚೆನ್ನಕೇಶವ ದೇವಾಲಯದ ಶಿಥಿಲವಾದ ಮರದ ಶಿಖರವನ್ನು ಬದಲಿಸಿ ಇಟ್ಟಿಗೆಯ ಶಿಖರವನ್ನು ನಿರ್ಮಿಸಿದರು. ಕ್ರಿ.ಶ. ೧೬೨೫ ರಲ್ಲಿ ಇಪ್ಪತ್ತಾರು ಅಂಕಣದ ಕೈಸಾಲೆ ಮಂಟಪದ ನಿರ್ಮಾಣದ ಉಲ್ಲೇಖವಿದೆ. ಈ ರೀತಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಹಲವು ಸೇರ್ಪಡೆಗಳನ್ನು ಕಾಣಬಹುದು.

**ಕರ್ನಾಟಕ**

| *ದೇವಾಲಯಗಳು* | *ಸ್ಥಳ* | *(ನಿರ್ಮಾಣ ಕಾಲ ಕ್ರಿ.ಶ.)* |
|---|---|---|
| ರಾಮನಾಥ | ಅಗರ | ೧೩೬೨ |
| ಗೋಪಾಲಕೃಷ್ಣ | ಬಾರಕೂರು | ೧೩೮೦ |
| ಮಲ್ಲಿಕಾರ್ಜುನ | ಹನುಮನಹಳ್ಳಿ | ೧೩೮೧ |
| ಕೇಶವ | ಬಲ್ಲಾಳಸಮುದ್ರ | ೧೩೮೭ |
| ವೆಂಕಟರಮಣ | ಗಡಿದಂ | ೧೩೯೧ |
| ಸೋಮೇಶ್ವರ | ಕವಟನಹಳ್ಳಿ | ೧೩೯೮ |
| ತಿರುಮಲನಾಥ | ಧರ್ಮಪುರಿ | ೧೪೦೧ |
| ವಿಶ್ವೇಶ್ವರ/ಲಕ್ಷ್ಮೀನಾರಾಯಣ | ಗುಲಗಂಜಿ | ೧೪೦೮ |
| ಕಲ್ಲಿನಾಥ | ಗೊಡಬನೂರು | ೧೪೨೯ |
| ಪ್ರಸನ್ನ ವಿರೂಪಾಕ್ಷ | ವಿರೂಪಾಕ್ಷಪುರ | ೧೪೩೧ |

| | | |
|---|---|---|
| ಹನುಮಂತ | ಕುಂದಗೋಳ | ೧೪೪೪ |
| ಸೌಮ್ಯ ಸೋಮೇಶ್ವರ | ನಿಂಬಾಪುರ | ೧೪೫೦ |
| ಸಿದ್ಧೇಶ್ವರ | ಸುಬ್ಬರಾಯನಕೊಪ್ಪ | ೧೪೬೦ |
| ಈಶ್ವರ | ಕಲ್ಲಿಶೆಟ್ಟಿಹಳ್ಳಿ | ೧೫ನೇ ಶತಮಾನ |
| ಹನುಮಂತ | ಕಲ್ಲುಕೆರೆ | ೧೫ನೇ ಶತಮಾನ |
| ನಾಗೇಶ್ವರ ರಂಗನಾಥ | ನಾಗೇನಹಳ್ಳಿ | ೧೫೧೬ |
| ಸೋಮೇಶ್ವರ | ಹಲ್ಕೂರು | ೧೫೨೩ |
| ರಾಮಚಂದ್ರ | ಗುಡಿಪಲ್ಲಿ | ೧೫೨೫ |
| ರಘುನಾಥ | ಗೋಕರ್ಣ | ೧೫೨೬ |
| ಪ್ರಾಣನಾಥ | ಗುತ್ತಗನೂರು | ೧೫೩೯ |
| ಗೋಪಾಲಕೃಷ್ಣ | ತಿಮ್ಮಲಾಪುರ | ೧೫೩೯ |
| ಭಂಡಾರೇಶ್ವರ/ವೀರಭದ್ರ | ತಿಮ್ಮಲಾಪುರ | ೧೫೩೯ |
| ವಿರೂಪಾಕ್ಷ | ಕಂಪ್ಲಿ | ೧೫೫೨ |
| ಚಂದ್ರಮೌಳೇಶ್ವರ | ಹೆಸರಘಟ್ಟ | ೧೫೫೩ |
| ಸಿದ್ಧಿವಿನಾಯಕ | ಕನ್ನಮೇಡಿ | ೧೫೫೮ |
| ರಾಮೇಶ್ವರ | ಪುರ | ೧೫೬೨ |

| *ಬಸದಿಗಳು* | *ಸ್ಥಳ* | *ಕಾಲ ಕ್ರಿ.ಶ.* |
|---|---|---|
| ಜಿನನಾಥ | ಕಮಲಾಪುರ | ೧೩೮೫ |
| ತ್ರಿಭುವನ ಚೂಡಾಮಣಿ | ಮೂಡಬಿದ್ರೆ | ೧೪೩೦ |
| ಶಾಂತಿನಾಥ | ಹಿರೇಚಂತಿ | ೧೩೪೯ |
| ಆದಿಪರಮೇಶ್ವರ | ಚಾರ | ೧೪೫೩ |
| ಪಾರ್ಶ್ವನಾಥ | ಯಡವಾಣಿ | ೧೪೭೩ |
| ಚೈತ್ಯಾಲಯ | ಹೊರಕೆರೆ | ೧೪೯೮ |
| ಸುಪಾರ್ಶ್ವನಾಥ | ಖಸ್ತಿಮಕ್ಕಿ | ೧೫೧೫ |
| ಚೈತ್ಯಾಲಯ | ಮಳವಳ್ಳಿ | ೧೫೪೭ |
| ಚೈತ್ಯಾಲಯ | ಕೈಕಿಣಿ | ೧೫೪೭ |
| ಶಾಂತಿನಾಥ | ಅಂಜನಗಿರಿ | ೧೫೫೪ |
| ಬಣ್ಣದ ಬಸದಿ | ಭಟ್ಕಳ | ೧೬ನೇ ಶತಮಾನ |

**ಆಂಧ್ರಪ್ರದೇಶ**

| | | |
|---|---|---|
| ಲಕ್ಷ್ಮೀನರಸಿಂಹ | ಕದಿರಿ | ೧೩೫೨ |
| ಮಾಧವಸ್ವಾಮಿ | ಗೋರಂಟ್ಲ | ೧೩೫೪ |
| ಶಿವ/ರಾಮ | ಪೆನುಕೊಂಡ | ೧೪ನೇ ಶತಮಾನ |
| ಮಲ್ಲಿಕಾರ್ಜುನ | ಚಂದ್ರಗಿರಿ | ೧೪ನೇ ಶತಮಾನ |
| ಚನ್ನಕೇಶವ | ಪುಷ್ಪಗಿರಿ | ೧೪೩೬ |
| ವೇದನಾರಾಯಣ | ನಾಗಾಲಾಪುರ | ೧೪೪೫ |
| ವಿಷ್ಣು | ಮಂಗಾಪುರ | ೧೪೬೨ |
| ವಿಷ್ಣು | ನಾರಾಯಣವನಂ | ೧೪೬೩ |
| ವೀರಭದ್ರ | ಲೇಪಾಕ್ಷಿ | ೧೫ನೇ ಶತಮಾನ |
| ಚನ್ನಕೇಶವ | ಸೋಮಪಲ್ಲಿ | ೧೬ನೇ ಶತಮಾನ |
| ವಿಷ್ಣು | ಶ್ರೀರಂಗಾಪುರಂ | ೧೫೧೩ |
| (ಕಾಳಹಸ್ತೀಶ್ವರ) ೧೦೦ ಕಂಬದ ಮಂಟಪ/ಗೋಪುರ | ಕಾಳಹಸ್ತಿ | ೧೫೧೬ |
| ಚನ್ನಕೇಶವ | ಮಾರ್ಕಾಪುರ | ೧೫೩೩* |

**ಕೆಲವು ಆಕರ ಗ್ರಂಥಗಳು :**

೧. ವಿ. ಜಯಪ್ರದಾ, ವಿಜಯನಗರ ಟೆಂಪಲ್ಸ್ ಆಫ್ ತಾಡಪತ್ರಿ, ಭಾರತೀಯ ಕಲಾ ಪ್ರಕಾಶನ, ದೆಹಲಿ, ೧೯೯೮.

೨. ಸಿ. ಎಸ್. ವಾಸುದೇವನ್, ಟೆಂಪಲ್ಸ್ ಆಫ್ ಆಂಧ್ರಪ್ರದೇಶ, ಭಾರತೀಯ ಕಲಾ ಪ್ರಕಾಶನ, ದೆಹಲಿ, ೨೦೦೦.

೩. ವಿ. ಕಾಮೇಶ್ವರರಾವ್, ಸೆಲೆಕ್ಟ್ ವಿಜಯನಗರ ಟೆಂಪಲ್ಸ್ ಆಫ್ ರಾಯಲ್‌ಸೀಮಾ, ಆಂಧ್ರಪ್ರದೇಶ ಸರ್ಕಾರ, ಹೈದರಾಬಾದ್, ೧೯೭೬.

೪. ಜಾರ್ಜ್ ಮೈಕೇಲ್ (ಸಂ.) ಟೆಂಪಲ್ಸ್ ಟೌನ್ಸ್ ಆಫ್ ತಮಿಳುನಾಡು, ಮಾರ್ಗ್ ಪಬ್ಲಿಕೇಷನ್ಸ್.

೫. ಕೆ. ವಿ. ರಾಮನ್, ಶ್ರೀ ವರದರಾಜ ಟೆಂಪಲ್, ಕಂಚಿ, ಅಭಿನವ್ ಪಬ್ಲಿಕೇಷನ್ಸ್, ನವದೆಹಲಿ, ೧೯೭೫.

೬. ಎಸ್. ಎನ್. ಶಿವರುದ್ರಸ್ವಾಮಿ, ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೬.

* ಹಂಪೆ ಸ್ಮಾರಕಗಳನ್ನು ಹೊರತುಪಡಿಸಿ ಸಿದ್ಧಪಡಿಸಿದ ಲೇಖನ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೧೧. ಉಪನಿಷತ್ತುಗಳು

-ಡಾ॥ ಎಸ್. ಆಯ್. ಹೆಗಡೆ[1]

ಭಾರತೀಯ ಸಂಸ್ಕೃತಿಯು ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದುದು. ನಮ್ಮ ಪುರಾತನ ಗ್ರಂಥಗಳಾದ ವೇದಗಳು ಅತ್ಯಮೂಲ್ಯವಾದ ಶಾಸ್ತ್ರಗ್ರಂಥಗಳು. ಇಂತಹ ನಾಲ್ಕು ವೇದಗಳನ್ನು ಪ್ರತ್ಯೇಕವಾಗಿ ಮೂರು ವಿಭಾಗ ಮಾಡಬಹುದು. ಅವು ಮಂತ್ರ, ಬ್ರಾಹ್ಮಣ ಹಾಗೂ ಉಪನಿಷತ್ತು.

ಮಂತ್ರ ಭಾಗದಲ್ಲಿ ಇಂದ್ರಾದಿ ದೇವತೆಗಳ ಸ್ತುತಿಗಳಿವೆ. ಇವುಗಳನ್ನು ಯಾಗ-ಯಜ್ಞಗಳನ್ನು ಮಾಡುವಾಗ ಹೇಳುವರು.

ಬ್ರಾಹ್ಮಣದಲ್ಲಿ ಯಾಗ-ಯಜ್ಞಗಳನ್ನು ಮಾಡುವ ವಿಧಾನಗಳ ವಿವರಗಳಿವೆ.

ಉಪನಿಷತ್ತು ವೇದಗಳ ಕೊನೆಯ ಭಾಗವಾದುದರಿಂದ ಅದನ್ನು 'ವೇದಾಂತ' ಎಂದೂ ಕರೆಯುವರು. ಕೆಲವರು ಮಾತನಾಡುವಾಗ ರಾಮಾಯಣ, ಮಹಾಭಾರತ ಹಾಗೂ ಪುರಾಣ ಪದಗಳನ್ನು ವ್ಯಂಗ್ಯಾರ್ಥದಲ್ಲಿ ಬಳಸುವರು. ಆದರೆ ಉಪನಿಷತ್ ಪದವು ಅಂತಹ ಅರ್ಥದಲ್ಲಿ ಬಳಕೆಯಾಗುತ್ತಿಲ್ಲ. ಏಕೆಂದರೆ ಇದು ಆಧ್ಯಾತ್ಮಿಕ ವಿಷಯ ಕುರಿತದ್ದಾಗಿದೆ.

ಉಪನಿಷತ್ತೆಂದರೆ, ಗುರುವಿನ ಹತ್ತಿರ ಕುಳಿತು ರಹಸ್ಯವಿದ್ಯೆ ಅಥವಾ ಬ್ರಹ್ಮಜ್ಞಾನವನ್ನು ಪಡೆಯುವುದು. ಉಪನಿಷತ್ತುಗಳಲ್ಲಿ ಹತ್ತು ಉಪನಿಷತ್ತಗಳು ಬಹಳ ಪ್ರಚಲಿತವಾಗಿವೆ. ಈ ಉಪನಿಷತ್ತುಗಳ ವಿಶೇಷವೆಂದರೆ, ಇವು ಕಥೆ ಅಥವಾ ಪ್ರಶ್ನೋತ್ತರ ರೂಪದಲ್ಲಿರುವುದು.

ಕಠೋಪನಿಷತ್ತೂ ಸಹ ಒಂದು ಕಥೆಯಿಂದಲೇ ಪ್ರಾರಂಭವಾಗುವುದು. ಈ

[1] ಮುಖ್ಯಸ್ಥರು, ಸಂಸ್ಕೃತ ವಿಭಾಗ, ಶೇಷಾದ್ರಿಪುರಂ ಪದವಿ ಕಾಲೇಜು, ಬೆಂಗಳೂರು-೫೬೦ ೦೨೦.

ಕಥೆಯ ನಾಯಕ ವಾಜಶ್ರವಸನ ಮಗ ನಚೀಕೆತನು ಒಮ್ಮೆ ವಾಜಶ್ರವಸನು "ವಿಶ್ವಜಿತ್" ಎಂಬ ಯಾಗವನ್ನು ಮಾಡುವನು. ಯಾಗದ ಆನಂತರ ಅವನು ಋತ್ವಿಕರಿಗೆ ದಾನ ಮಾಡಬಯಸಿದನು. ದಾನಗಳಲ್ಲಿ ಶ್ರೇಷ್ಠದಾನ ಗೋದಾನವು, ಆದುದರಿಂದ ಅವನು ಅನುಪಯುಕ್ತ (ಮುದಿ) ಹಸುಗಳನ್ನು ದಾನ ಮಾಡಿದನು. ಬಾಲಕನಾದ ನಚೀಕೆತನು ತಂದೆಯ ದಾನಗಳನ್ನು ಗಮನಿಸುತ್ತಿದ್ದನು. ಉಪಯೋಗಕ್ಕೆ ಬಾರದಹಸುಗಳ ದಾನದಿಂದ ಧುಃಖಿತನಾಗಿ, ನನ್ನನ್ನು ಯಾರಿಗೆ ದಾನ ಮಾಡುವೆ " ಎಂದು ತಂದೆಯನ್ನು ಕೇಳುತ್ತಾನೆ. ವಾಜಶ್ರವಸನು ಕೋಪದಿಂದ "ಮೃತ್ಯುವೇ ತ್ವಾಂ ದದಾಮೀತಿ", (ಶ್ಲೋಕ–೪) ಯಮನಿಗೇ ನಿನ್ನನ್ನು ದಾನ ಮಾಡುವೆ ಎಂದು ಹೇಳಿದನು, ತಂದೆಯ ಮಾತು ಸುಳ್ಳಾಗಬಾರದೆಂದು ಅವನು ಯಮಲೋಕಕ್ಕೆ ಪ್ರಯಾಣಿಸುವನು. ಆದರೆ ಯಮನು ಮನೆಯಲ್ಲಿ ಇಲ್ಲದ ಕಾರಣ ಮೂರು ದಿನ, ಅವನ ಮನೆಯ ಬಾಗಿಲಲ್ಲಿ ಕಾಯುವನು. ಮನೆಗೆ ಬಂದಾಗ ಯಮನಿಗೆ ವಿಷಯವು ತಿಳಿಯುವುದು. ಬಾಲಕನನ್ನು ಮೂರುದಿನ ಕಾಯುವಂತೆ ಮಾಡಿದ ತಪ್ಪಿಗಾಗಿ ಮೂರು ವರವನ್ನು ಕೊಡುವುದಾಗಿ ಯಮನು ಹೇಳುತ್ತಾನೆ. ಬಾಲಕನು ಮೂರು ವರಗಳನ್ನು ಪ್ರಾರ್ಥಿಸುವುದೇ, ಈ ಉಪನಿಷತ್ತಿನ ವಿಷಯವು.

ಈ ಸಣ್ಣ ಕಥೆಯು (ಯಾಗ) ಎಂತಹ ಧರ್ಮ ಸೂಕ್ಷ್ಮವಾದ ವಿಷಯಗಳ ಚರ್ಚೆಗೆ ಆಸ್ಪದವಾಯಿತು ಎಂಬುದು ಇಲ್ಲಿನ ಪ್ರಧಾನ ವಿಷಯವು. ತಂದೆಯ ಮಾತು ಸುಳ್ಳಾಗಬಾರದೆಂದು ಯಮಲೋಕಕ್ಕೆ ಹೊರಟ ಮಗನನ್ನು ವಾಜಶ್ರವಸನು ತಡೆಯುವನು. ಅದಕ್ಕೆ ಬಾಲಕನ ಪ್ರತಿಕ್ರಿಯೆ ಎಂದರೆ, "ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾಽಪರೆ" (ಶ್ಲೋಕ–೬)

ಪೂರ್ವಿಕರು ಹೇಗೆ ಎಂಬುದನ್ನು ನೋಡು–ಹಾಗೆಯೇ ಉಳಿದವನ್ನು ನೋಡು, ಸಂಪ್ರದಾಯಸ್ಥ ಮನೆಯಲ್ಲಿ ಜನಿಸಿದ ನೀನು ಮಾಡುತ್ತಿರುವುದು ಸರಿಯೇ ? ಎಂಬುದು ಅವನ ಪ್ರತ್ಯುತ್ತರ. ಇಲ್ಲಿ ನಚೀಕೆತನು ಜೀವನದಲ್ಲಿ ಆದರ್ಶ ಮುಖ್ಯ ಎನ್ನುವನು.

ಯಮನು ಮೂರು ವರಗಳನ್ನು ಕೇಳು ಎಂದಾಗ. ಬಾಲಕ ನಚೀಕೆತನು ಎಂತಹ ನಿಸ್ವಾರ್ಥ ಹಾಗೂ ಪರಾರ್ಥಗಳ ಪ್ರಶ್ನೆಗಳನ್ನು ಕೇಳುವನು. ಮೊದಲನೆಯ ವರ. ತನ್ನ ತಂದೆಯು ಶಾಂತಚಿತ್ತನಾಗಲಿ, ಎರಡನೆಯದಾಗಿ, ಸ್ವರ್ಗಲೋಕಕ್ಕೆ ಒಯ್ಯುವ ಯಾಗದ ಬಗ್ಗೆ ವಿವರಿಸು ಎಂದು ಪ್ರಾರ್ಥಿಸುವನು. ಕೊನೆಯದಾಗಿ, ಮರಣದ ಆನಂತರ ಕೆಲವರು ಮನುಷ್ಯ ಇರುವನೆಂದೂ ಇನ್ನೂ ಕೆಲವರು ಇರುವುದಿಲ್ಲವೆಂದೂ ಹೇಳುವರು. ಈ ಸಂಶಯವನ್ನು ನಿವಾರಿಸು ಎಂದು ಕೇಳುವನು.

ಈ ಧರ್ಮ ಸೂಕ್ಷ್ಮ ವಿಷಯವು. ಈ ಉಪನಿಷತ್ತಿನ ಮುಂದಿನ ಅಧ್ಯಾಗಳಲ್ಲಿ

(ವಲ್ಲಿ) ಚರ್ಚಿಸಲಾಗಿದೆ. ಇದರೊಂದಿಗೆ ಕಠೋಪನಿಷತ್ತಿನ ಕಥೆಯು (ವಿಷಯ) ಪೂರ್ಣವಾಗುವುದು. ಉಪನಿಷತ್ತುಗಳು ತತ್ವ ಪ್ರಧಾನ ವಿಷಯಗಳಾಗಿವೆ. ನಮ್ಮ ಹಿಂದಿನ ಋಷಿಗಳು, ತಮ್ಮ ತಪಸ್ಸಿನ ಮೂಲಕ ಆತ್ಮಸಾಕ್ಷಾತ್ಕಾರ ಮಾಡಿಕೊಂಡರು. ಅದರಿಂದ ಲೌಕಿಕ ಬದುಕು ಅಸತ್ಯವೆಂದು ತಿಳಿದರು. ಜೀವನ (ಆತ್ಮ) ಸತ್ಯವನ್ನು ಅರಿತರು. ಈ ಸತ್ಯದ ಅನುಭವವನ್ನು ಅವರು ತಮ್ಮ ಶಿಷ್ಯರಿಗೆ ಉಪದೇಶಿಸಿದರು. ಹೀಗೆ ಉಪನಿಷತ್ತುಗಳು ಗುರು_ಶಿಷ್ಯ ಪರಂಪರೆಯಿಂದ ಬಂದಿರುವುದು. ಇದರಲ್ಲಿ ಎಲ್ಲಿಯೂ ಈ ಕೃತಿಗಳನ್ನು ರಚಿಸಿದವರ ಉಲ್ಲೇಖವಿಲ್ಲ.

ಈ ಉಪನಿಷತ್ತುಗಳಲ್ಲಿ ಎಲ್ಲಿಯೂ ಒಂದು ನಿರ್ದಿಷ್ಟವಾದ ದೇವರ ಹೆಸರೂ ಇಲ್ಲ. ಪರಬ್ರಹ್ಮ ವಿಷಯವೇ ಇಲ್ಲಿ ಪ್ರಧಾನವಾಗಿದೆ. ಕೆಲವು ಉಪನಿಷತ್ತುಗಳಲ್ಲಿ ಸೃಷ್ಟಿಯ ಹಾಗೂ ಮಾನವನ ಉತ್ಪತ್ತಿ ವಿಷಯಗಳನ್ನು ಚರ್ಚಿಸಲಾಗಿದೆ. ಬಹುಶಃ ಇಂತಹ ವಿಷಯಗಳು ವಿಜ್ಞಾನಕ್ಕೂ ಸಿಗದ ವಿಷಯಗಳಾಗಿವೆ.

ತೈತ್ತೀರಿಯ ಉಪನಿಷತ್ತಿನಲ್ಲಿ ಅಧ್ಯಯನದ ಬಗ್ಗೆ ತಿಳಿಸಲಾಗಿದೆ. ವಿದ್ಯೆ ಪಡೆದ ಬಳಿಕ ವಿದ್ಯಾರ್ಥಿ ಕರ್ತವ್ಯಗಳು ಸಮಾಜದಲ್ಲಿ ಹೇಗಿರಬೇಕು ? ಸಮಾಜಕ್ಕೆ ಅವನ ಕೊಡುಗೆಯ ಬಗ್ಗೆ ವಿವರಿಸಲಾಗಿದೆ.

"ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲ ನಂದನಃ" ಎಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವನು. ಇಲ್ಲಿ ಉಪನಿಷತ್ತಿನ ಸಾರವನ್ನು ತಿಳಿಯಬಹುದಾಗಿದೆ. ಜೀವನದಲ್ಲಿ ಸಾಧನೆಗೆ ಗುರಿ ಮುಖ್ಯ. ಗುರಿ ತಲುಪಲು ಶ್ರದ್ಧೆ, ತ್ಯಾಗ ಹಾಗೂ ಪರಿಶುದ್ಧ ಮನಸ್ಸು ಬೇಕು. ಹಿಂದಿಗಿಂತಲೂ ಇಂದು ಈ ಉಪನಿಷ್ತುಗಳ ಅಧ್ಯಯನವು ಅತಿ ಅವಶ್ಯವಾಗಿದೆ. ಅಶಾಂತಿಯ ಬದುಕಿಗೆ ಇಲ್ಲಿಯ ಶಾಂತಿ ಪಾಠಗಳು (ಮಂತ್ರ) ಒಂದೇ ಪರಿಹಾರ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೧೨. ಕನ್ನಡ ಸಾಹಿತ್ಯದಲ್ಲಿ ಕುಣಾಲಾವದಾನ

-ಪಿ. ನರಸಿಂಹಮೂರ್ತಿ*

ಭಾರತದ ಇತಿಹಾಸ ಪ್ರಪಂಚದಲ್ಲಿ ಸಾಮ್ರಾಟ ಅಶೋಕನ ಹೆಸರನ್ನು ಕೇಳದವರಿಲ್ಲ. ದೇವಾನಾಂಪ್ರಿಯ, ಪ್ರಿಯದರ್ಶಿನ್ ಎಂದೆಲ್ಲ ಖ್ಯಾತನಾಗಿರುವ ಅಶೋಕನು ತನ್ನ ಜೀವನದ ಪರ್ವಕಾಲದಲ್ಲಿ ಬೌದ್ಧ ಧರ್ಮವನ್ನು ಆಸರಿಸಿದನು ಎಂದೂ ಸಹ ಹೇಳಲಾಗಿದೆ.ಅರಸನಾಗಿ ಆಳಿದ, ಹಲವಾರು ಯುದ್ಧಗಳನ್ನು ಮಾಡಿದ ಅಶೋಕನು ಕಳಿಂಗದ ಕದನದ ನಂತರ ಅಹಿಂಸಾ ತತ್ವವನ್ನು ಲೋಕಕ್ಕೆ ಸಾರಿದ ಕಥೆ ರೋಚಕವಾದುದೇ ಸರಿ. ಕಠಿಣ ಹೃದಯಿಯಾದ ಅಶೋಕನು ಬುದ್ಧನ ಅನುಯಾಯಿಯಾಗಿ ಪರಿವರ್ತಿತನಾದದ್ದು ಮತ್ತು ತನ್ನ ಮಗ ಹಾಗೂ ಮಗಳನ್ನು ಬೌದ್ಧ ತತ್ವ ಪ್ರಚಾರಕ್ಕಾಗಿ ನಿಯಮಿಸಿದುದು ಇತಿಹಾಸದಲ್ಲಿ ಅಶೋಕನಿಗೆ ಒಂದು ಶಾಶ್ವತವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ಅಶೋಕನ ಈ ಮನಃ ಪರಿವರ್ತನೆಗೆ ಕಾರಣವಾದರೂ ಏನು ಎಂದು ತಿಳಿಯಹೊರಟಾಗ ಹಲವಾರು ವಿಸ್ಮಯಕಾರಿ ವಿಷಯಗಳು ಹೊರಬರುತ್ತವೆ. ಅವುಗಳಲ್ಲಿ ಸಂಶೋಧನೆಯ ಫಲವಾದ ಹಲವಾರು ಗ್ರಂಥಗಳು, ಅಶೋಕನ ಶಿಲಾಶಾಸನಗಳು,ವಿದೇಶೀ ಯಾತ್ರಿಕರ ವರ್ಣನೆಗಳು ಇತ್ಯಾದಿ ಮುಖ್ಯವಾದವು. ಆದರೆ ಇವೆಲ್ಲವುಗಳನ್ನು ಮೀರಿಸುವ ಒಂದು ಸಂಸ್ಕೃತ ಗ್ರಂಥದ ತುಣುಕು, ಅಷ್ಟೇನೂ ಪ್ರಚಾರದಲ್ಲಿಲ್ಲದಿದ್ದರೂ ಮೈ ನವಿರೇಳಿಸುವ ವಿಶೇಷ ಮಾಹಿತಿಯನ್ನು ನೀಡುತ್ತದೆ. ಅದೇ " ಅಶೋಕಾವದಾನ". ಇದು "ದಿವ್ಯಾವದಾನ" ಎಂಬ ಗ್ರಂಥದ ಒಂದು ಅಧ್ಯಾಯ. ಸದ್ಯಕ್ಕೆ ಈ ಗ್ರಂಥವು ಕನ್ನಡದಲ್ಲಿ ಲಭ್ಯವಿಲ್ಲ. ನನ್ನ ಕಾಲೇಜಿನ ದಿನಗಳಲ್ಲಿ ಒಮ್ಮೆ ನನ್ನ ಸ್ವಂತ ಸಂಗ್ರಹದ ಪುಸ್ತಕಗಳಲ್ಲಿ ಒಂದಾದ ವಡ್ಡಾರಾಧನೆಯ ಪುಟಗಳನ್ನು ತಿರುವಿಹಾಕುತ್ತಿದ್ದಾಗ ಕಣ್ಣಿಗೆಬಿದ್ದ ಈ ಕುಣಾಲಾವದಾನದ ಪಂಕ್ತಿಗಳನ್ನು ಹೊರತಂದು

* ನಂ. 'ಬಿ'/೪೦೧. 'ಅರವಿಂದ್ ಆರ್ಚರ್ಡ್ಸ್'. ಕೊಡಿಗೇಹಳ್ಳಿ ಮುಖ್ಯರಸ್ತೆ. ಸಹಕಾರನಗರ. ಬೆಂಗಳೂರು-೫೬೦ ೦೯೨.

ತನ್ಮೂಲಕ ಇಡೀ ಅಶೋಕಾವದಾನದ ಪರಿಚಯ ಮಾಡಿಸುವ ಉದ್ದೇಶವಿತ್ತು. ಅದು ಇಂದು ಬೆಳಕು ಕಾಣುತ್ತಿರುವುದು ಸಂತಸದ ಸಂಗತಿ. ಪ್ರಸ್ತುತ ಲೇಖನಕ್ಕಾಗಿ ಶ್ರೀ ಸುಜಿತ್ ಕುಮಾರ್ ಮುಖ್ಯೋಪಾಧ್ಯಾಯರಿಂದ ಪರಿಷ್ಕೃತವಾದ ಸಂಸ್ಕೃತದ ಅಶೋಕಾವದಾನವನ್ನು ಆಧಾರವಾಗಿರಿಸಿ ಕೊಂಡಿದ್ದು,ಕನ್ನಡದ ಭಾಗವನ್ನು ಶ್ರೀ ಡಿ ಎಲ್ ನರಸಿಂಹಾಚಾರ್ಯರಿಂದ ಸಂಪಾದಿತ ವಡ್ಡಾರಾಧನೆಯಿಂದ ಉದ್ಧರಿಸಲಾಗಿದೆ.

ದಿವ್ಯಾವದಾನದಲ್ಲಿ ಕ್ರಮವಾಗಿ ೧.ಪಾಂಶುಪ್ರದಾವದಾನ ೨.ವೀತಶೋಕಾವದಾನ ೩.ಕುಣಾಲಾವದಾನ ಹಾಗೂ ೪.ಅಶೋಕಾವದಾನ ಎಂಬ ನಾಲ್ಕು ಅಧ್ಯಾಯಗಳಿವೆ.ಇವುಗಳ ಸಂಕ್ಷಿಪ್ತ ವಿವರಣೆ ಈ ರೀತಿಯದು.

ಹೆಸರೇ ಹೇಳುವಂತೆ "ಪಾಂಶುಪ್ರದಾವದಾನ" ಎಂಬ ಅಧ್ಯಾಯದಲ್ಲಿ, ಅಶೋಕನ ಹಿಂದಿನ ಜನ್ಮದ ಕಥೆಯಿದೆ. ಒಂದು ದಿನ ಬುದ್ಧ ಭಗವಾನನು ಭಿಕ್ಷಕ್ಕಾಗಿ ಬಂದಿದ್ದಾಗ, ಮಣ್ಣೆಂದು ಅರಿಯದ ಬಾಲಕ ಅಶೋಕನು, ಧಾನ್ಯದ ಹಿಟ್ಟೆಂದು ತಿಳಿದು ಹಿಡಿ ಮಣ್ಣನ್ನು ಭಿಕ್ಷುವಿಗೆ ದಾನ ಮಾಡಿದನು. ಪರಿಶುದ್ಧ ಮನಸ್ಸಿನಿಂದ ಮಾಡಿದ ಈ ದಾನದ ಪರಿಣಾಮವಾಗಿ ಬಾಲಕನು ತನ್ನ ಮುಂದಿನ ಜನ್ಮದಲ್ಲಿ ವಿಶಾಲ ಜಂಬೂದ್ವೀಪವನ್ನು ಆಳುವ ಅಶೋಕ ಸಾಮ್ರಾಟನಾದನು.

ಎರಡನೆಯದು ವೀತಶೋಕನನ್ನು ಕುರಿತದ್ದು. ವೀತಶೋಕನು ರಾಜ ಅಶೋಕನ ತಮ್ಮನಾಗಿದ್ದು ಜೀವನದಲ್ಲಿ ಮೊದಲಿಗೆ ಕುಕರ್ಮಗಳಿಗೆ ಬಲಿಯಾಗಿದ್ದನು. ಬುದ್ಧ ಶ್ರಮಣರನ್ನು ಕುಚೋದ್ಯದಿಂದ ನೋಡುತ್ತಿದ್ದುದಲ್ಲದೆ ತನ್ನ ಅಣ್ಣ ಅಶೋಕನ ಬಗ್ಗೆ ಅನುಕಂಪ ಹೊಂದಿದ್ದನು. ತದನಂತರ ಬೌದ್ಧ ಧರ್ಮದಲ್ಲಿ ಆಸಕ್ತಿ ತಳೆದು ಪ್ರಾಪಂಚಿಕ ಜೀವನದಿಂದ ವಿರಕ್ತನಾದನು. ತನ್ನ ಪ್ರಿಯ ಅನುಜನ ದುರ್ಮರಣವು ಅಶೋಕನನ್ನು ಪರೋಕ್ಷವಾಗಿ ಪ್ರೇರೇಪಿಸಿ ಜೀವನದಲ್ಲಿ ಪೂರ್ಣವಾಗಿ ಬದಲಾಗುವಂತೆ ಮಾಡಿತು.

ನಾಲ್ಕನೆಯ ಅಧ್ಯಾಯವು ಇತಿಹಾಸದ ದೃಷ್ಟಿಯಿಂದ ಮುಖ್ಯವಾದದ್ದು. ಸಾಮ್ರಾಟ ಅಶೋಕನ ಜೀವನದ ಕೊನೆಯ ದಿನಗಳ ಬಗೆಗಿನ ವಿವರಗಳು ಇಲ್ಲಿ ತಿಳಿದುಬರುತ್ತವೆ. ಆತನು ತನ್ನ ಶಯನಗೃಹವನ್ನು ಬಿಟ್ಟು ಹೊರಗೆ ಬರುತ್ತಿರಲಿಲ್ಲ. ಒಂದು ಕಾಲಕ್ಕೆ ಅಪರಿಮಿತ ಐಶ್ವರ್ಯದ ಒಡೆಯನಾಗಿದ್ದವನು, ಹಾಗೂ ಕೈ ಬಿಗಿ ಹಿಡಿಯದೆ ದಾನ ಮಾಡುತ್ತಿದ್ದವನು ಎಂತಹ ದಯನೀಯ ಸ್ಥಿತಿಗೆ ಬಂದಿದ್ದನೆಂದರೆ ಆತನ ಬಳಿ ಒಂದು ಕವಡೆಯಷ್ಟೂ ಸಂಪತ್ತು ಇರಲಿಲ್ಲ. ಭಿಕ್ಷುಗಳಿಗೆ ದಾನ ಮಾಡಿಬಿಡುವನೆಂಬ ಶಂಕೆಯಿಂದ ಚಿನ್ನದ ತಟ್ಟೆಗಳಿಗೆ ಬದಲಾಗಿ ಮಣ್ಣಿನ ತಟ್ಟೆಯಲ್ಲಿ ಊಟವನ್ನು ನೀಡಲಾಗುತ್ತಿತ್ತು ಎಂಬುದು ದಾರುಣವಾದ ದೃಶ್ಯವನ್ನು ತಿಳಿಸುತ್ತದೆ.

ಮೂರನೆಯ ಅಧ್ಯಾಯವಾದ "ಕುಣಾಲಾವದಾನ" ಪ್ರಸ್ತುತ ಲೇಖನದ ವಸ್ತು.

ಈ ಕುಣಾಲಾವದಾನದಲ್ಲಿ ಹಲವಾರು ದಂತಕಥೆಗಳಿವೆ.ಪ್ರಾರಂಭದಲ್ಲಿ ಅಶೋಕನು ತನ್ನ ಮಂತ್ರಿ ಯಶಸ್ಸನ್ನು ಮಣಿಸಿದ ಬಗೆಗಿನ ವರ್ಣನೆಯಿದೆ. ಅದಾದ ನಂತರದ ಕಥೆ ಗುರು ಉಪಗುಪ್ತ ಮತ್ತು ಅಶೋಕ ಇವರು ಸಂಧಿಸಿದ ಬಗೆಗಿನದು. ಗುರುಗಳಾದ ಉಪಗುಪ್ತರು ತಮ್ಮ ಶಿಷ್ಯನಾದ ಅಶೋಕನನ್ನು ಭಗವಾನ್ ಬುದ್ಧ ಹುಟ್ಟಿ,ಬೆಳೆದು, ತಪಸ್ಸುಮಾಡಿ ಕೊನೆಗೆ ಸಿದ್ಧಿಯನ್ನು ಪಡೆದ ಹತ್ತು ಹಲವು ಸ್ಥಳಗಳನ್ನು ದರ್ಶಿಸಲು ಕರೆದೊಯ್ದರು. ಇವುಗಳಲ್ಲಿ ಬುದ್ಧ ಗುರುವು ಧರ್ಮ ಚಕ್ರವನ್ನು ಸ್ಥಾಪಿಸಿದ, ಕೊನೆಯುಸಿರೆಳೆದ ಸ್ಥಳಗಳಲ್ಲದೆ, ಅವರ ಖ್ಯಾತ ಶಿಷ್ಯರುಗಳಾದ ಶಾರೀಪುತ್ರ, ಮೌದ್ಗಲ್ಯಾಯನ, ಕಾಶ್ಯಪ ಮತ್ತು ಆನಂದ ಇವರುಗಳು ಶರೀರತ್ಯಾಗ ಮಾಡಿದ ಸ್ಥಳಗಳೂ ಸೇರಿದ್ದವು. ನಂತರದ ಕಥೆ ರಾಣಿ ತಿಶ್ಯರಕ್ಷಿತಳನ್ನು ಕುರಿತದ್ದು. ಈಕೆಯು ಈರ್ಷೆಯಿಂದ ಬೋಧಿವೃಕ್ಷವನ್ನು ನಾಶಮಾಡಲು ಹೊರಟ ಕಥೆಯೂ ಬರುತ್ತದೆ. ಇವೆಲ್ಲವುಗಳ ಬಳಿಕ ಬರುವುದು ಕುಣಾಲನ ಕಥೆ. ಇದು ಅತಿ ದಾರುಣವಾದ ಕಥಾವಸ್ತುವನ್ನು ಕುರಿತು ಇದುವರೆಗೆ ಬರೆಯಲ್ಪಟ್ಟಿರುವ ಕಥೆಗಳಲ್ಲಿ ಅತಿ ಮುಖ್ಯವಾದದ್ದು. ರಾಮಾಯಣದ ಕೈಕೇಯಿಯಂತೆ ರಾಣಿ ತಿಶ್ಯರಕ್ಷಿತೆಗೂ ಒಂದು ವರವು ದೊರೆತಿತ್ತು. ಈ ವರದ ಪರಿಣಾಮವಾಗಿ ಆಕೆಯು ಒಂದು ವಾರದ ಕಾಲ ಇಡೀ ಜಂಬೂದ್ವೀಪದ ರಾಣಿಯಾದಳು. ರಾಣಿಯಾದ ಕೂಡಲೇ ಅವಳು ಮಾಡಿದ ಕಾರ್ಯವೆಂದರೆ ತನ್ನ ಮಲಮಗನಾದ ಯುವರಾಜ ಕುಣಾಲನ ಕಣ್ಣುಗಳನ್ನು ಕೀಳಿಸಿದುದು. ರಾಜಮುದ್ರೆಯೊತ್ತಿ, ಭದ್ರಪಡಿಸಿದ ಆದೇಶವನ್ನು ಜಾರಿಗೊಳಿಸುವ ಸಲುವಾಗಿ ರಾಜಕುಮಾರ ಕುಣಾಲನು ವಾಸಿಸುತ್ತಿದ್ದ ತಕ್ಷಶಿಲೆಗೆ ಕಳುಹಿಸಿದಳು. ನೀಲ ತಾವರೆಯಂತೆ ಕಂಗೊಳಿಸುತ್ತಿದ್ದ,ಕುಣಾಲ ಪಕ್ಷಿಗಳ ಕಣ್ಣುಗಳನ್ನು ಹೋಲುವ ಮಗನ ಕಣ್ಣುಗಳನ್ನು ಕೀಳಿಸಲಾಯಿತು. ರಾಜ ಅಶೋಕನಿಗೆ ಇದರ ಸುಳಿವು ಇರಲಿಲ್ಲ. ನಂತರ ಸಂಧಿಸಲು ಬಂದ ರಾಜನು, ಕುರುಡನಾದ ತನ್ನ ಮಗನನ್ನು ಕಂಡು ಅತಿ ಕ್ರೋಧಿತನಾಗಿ ತನ್ನ ರಾಣಿಗೆ ಮರಣದಂಡನೆಯನ್ನು ವಿಧಿಸಲು ತೀರ್ಮಾನಿಸಿದನು.ಆದರೆ ಕರುಣಾಮಯಿಯಾದ ಯುವರಾಜನು ರಾಣಿಯನ್ನು ಕ್ಷಮಿಸುವಂತೆ ಗೋಗರೆದನು. ಆದರೆ ಆಕೆಗೆ ಕ್ಷಮೆ ದೊರೆಯಲಿಲ್ಲವೆಂಬುದು ನಂತರದ ವಿಷಯ.

ಕನ್ನಡದಲ್ಲಿ ಕುಣಾಲಾವದಾನದ ಕಥೆ ದೊರೆಯುವುದು ವಡ್ಡಾರಾಧನೆಯ ೬ನೆ ಅಧ್ಯಾಯವಾದ ಭದ್ರಬಾಹು ಭಟ್ಟಾರರ ಕಥೆಯಲ್ಲಿ. ಆ ಭಾಗವನ್ನು ಕೆಳಗೆ ಉದ್ಧರಿಸಲಾಗಿದೆ. ಕಥೆ ಸಂಕ್ಷಿಪ್ತವಾಗಿದ್ದರೂ ಜೈನ ಸಾಹಿತ್ಯದಲ್ಲಿ ಇದು ಅಡಗಿರುವುದು ನಿಜಕ್ಕೂ ಮುಖ್ಯವಾದ ಸಂಗತಿ.

"ಇತ್ತ ಭದ್ರಬಾಹು ಭಟ್ಟಾರರ್ ಚತುರ್ದಶಪೂರ್ವಧಾರಿಗಳುಂ ಕಡೆ

[ಯಾ]ರಿಸಿಯಯ್ಯನೆಯ ಶ್ರುತಕೇವಳಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮ ನಗರಖೇಡಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಿರ್ಪನ್ನೆಗಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದು ಪೊಲಲದನಾಳ್ವೊಂ ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ ಮತ್ತೊಂದು ದಿವಸಂ ಚಾಣಾಕ್ಯನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟಿ ಕಳೆಯಿಸಿದೊಡಾತನುಂ ಮುಳಿದು ನಂದನಂ ಕೆಡಿಸಿ ನಂದನ ರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರಗುಪ್ತನೆಂಬೊನಂ ನಿಱಿಸಿದೊಡಾತನುಂ ಪಲಕಾಲಮರಸುಗೆಯ್ದು ಕಱಿದೊಡಾತನ ಮಗಂ ಬಿಂದುಸಾಗರನೆಂಬೊನರಸುಗೆಯ್ದು ಕಱಿದ ಬಱಿಕ್ಕಾತನ ಮಗನ ಶೋಕನೆಂಬೊನರಸುಗೆಯ್ಯುತ್ತಿರೆ ಆತನ ಮಗಂ ಪ್ರತಾಪದಿಂ ತೇಜ ದಿಂದಾದಿತ್ಯನೊಳೋರನ್ನನಪ್ಪೊಂ ಕುಣಾಳನೆಂಬೊನಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮಶೋಕ ಮಹಾರಾಜಂ ಪರಚಕ್ರದ ಮೇಗೆತ್ತಿ ಪೋಗಿ ಅಲ್ಲಿಂದಂ ಮಂತ್ರಿ ಪುರೋಹಿತ ತಳವಱಾದಿಗಳ್ಗಿಂತೆಂದೋಲೆಯಟ್ಟಿದೊನುಪಾಧ್ಯಾಯಂಗೆ ಕಱಿಮೆಯ ಕೂಱುಂ ತುಪ್ಪಮಂ ತೊವೆಯುಮನುಣಲ್ಕೊಟ್ಟು ಕುಮಾರನನನೋದಿಸುಗೆಂದೋಲೆಯನಟ್ಟಿದೊಡೆ ವಾಚಕನೋಲೆಯರ್ಥಮನಱಿಯದೆ ವಿಪರೀತಮಾಗಿಂತೆಂದು ಬಾಚಿಸಿದನ್

ಊಪಾಧ್ಯಾಯಂ ಶಾಲಿಂ ಕೂರಂ ಚ ಮಶಿಂ ಘೃತಂ ದತ್ವಾ ಕುಮಾರ ಮಂಧಾಪಯೇತ್

ಎಂದಿಂತು ವಿಪರೀತಮಾಗಿ ಲೇಖಾರ್ಥಮಂ ಬಾಚಿಸಿದೊಡನಿಬರುಂ ಕೇಳ್ದು ಅಪ್ರತಿಹತಶಾಸನನಪ್ಪ ನೃಪತಿಯಾಜ್ಞೆಗೆ ಭಯಸ್ಥರ್ಕಳಾಗಿ ಉಪಾಧ್ಯಾಯಂಗೆ ಕಱಿಮೆಯ ಕೂಱುಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು ಕುಣಾಳನೆಂಬ ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದರಸಂ ಪರಚಕ್ರಮಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನುಮುಬ್ಬೆಗಂಬಟ್ಟು ಸೈರಿಸಲಾಱದೆ ಕುಣಾಳನರಸಿ ಚಂದ್ರಾನನೆಯೊಂಬೊಳ್ಗೆ ಮಗಂ ಪುಟ್ಟಿದೊಡಾತಂಗೆ ಸಂಪ್ರತಿ ಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ ಸಮಸ್ತ ರಾಜ್ಯಭಾರಮೆಲ್ಲಮಂ ನಿರೂಪಿಸಿ ಕುಣಾಳನುಮನೆಂದಂ ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀ ರತ್ನಮಂ ಬೇಡಿದೊಡಾ ರತ್ನಂ ಚಕ್ರವರ್ತಿಗಲ್ಲದಿಲ್ಲೆಂದು ಮಗಂಗೆ ಮಱುಮಾತುಗೊಟ್ಟು ಸಂಸಾರ ವೈರಾಗ್ಯಮಾದಮಾನುಂ ಪೆರ್ಚಿ ಸುವ್ರತರೆಂಬ ಭಟ್ಟಾರರ ಪಕ್ಕದೆ ಜಿನದೀಕ್ಷೆಯಂ ಕೈಕೊಂಡು ಪರತ್ರೆಯಂ ಸಾಧಿಸಿದೊಂ

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೧೩. ನವವಸಾಹತುಶಾಹಿ ಓದು - ಆದಿಪುರಾಣ

-ಡಾ॥ ವಿಜಯಾ ಸುಬ್ಬರಾಜ್*

ಅಹಂಕಾರ ಮೂಲವಾದ ವಸಾಹತುಶಾಹಿ, ಸಾಮ್ರಾಜ್ಯಶಾಹಿ, ನವ ವಸಾಹತು ಶಾಹಿ ಅಥವಾ ಜಾಗತೀಕರಣಗಳ ಕಲ್ಪನೆ ಇಂದು ನೆನ್ನೆಯದಲ್ಲ. ದರ್ಪ, ದೌರ್ಜನ್ಯ ದಬ್ಬಾಳಿಕೆ, ಅಹಂಕಾರಗಳು ಅಧಿಕಾರಾಕಾಂಕ್ಷಿಗಳ ಸಹಜ ಪ್ರವೃತ್ತಿಗಳಾಗಿವೆ. ಮನುಷ್ಯರಲ್ಲಷ್ಟೇ ಅಲ್ಲದೆ ಸೃಷ್ಟಿಯಲ್ಲಿ ಸಮಸ್ತ ಜೀವಸಂಕುಲವನ್ನೂ ಈ ಪ್ರವೃತ್ತಿಗಳು ಆವರಿಸಿವೆ. ದುರ್ಬಲರನ್ನು ಬಲಿಷ್ಠರು, ದಡ್ಡರನ್ನು ಬುದ್ಧಿವಂತರು, ಬಡವರನ್ನು ಶ್ರೀಮಂತರು, ಕೆಳವರ್ಗದವರನ್ನು ಮೇಲ್ವರ್ಗದವರು ಶೋಷಿಸುವ ಪ್ರಕ್ರಿಯೆ ನಿರಂತರವಾಗಿ ಸಾಗಿಬಂದಿದೆ. ನೈಸರ್ಗಿಕ ನಿಯಮದಂತೆ ಹುಲಿ-ಹುಲ್ಲೆಯ ವರ್ಗ (predator-prey) ಸೃಷ್ಟಿಯಾಗಿವೆ. ಶೋಷಿತ-ಶೋಷಕವರ್ಗ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಭೌತಿಕ, ಬೌದ್ಧಿಕ-ಎಲ್ಲ ವಲಯಗಳಲ್ಲಿದ್ದೂ, ಸ್ಪರ್ಧೆ, ಪ್ರತಿಭಟನೆ, ಸಮರದಂತಹ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿರುತ್ತವೆ. ಅಧಿಕಾರ, ಶ್ರೇಷ್ಠತೆ, ಸಂಪತ್ತು, ಕೀರ್ತಿಗಳಿಕೆಗಾಗಿ ಮಾತ್ರವೇ ಅಲ್ಲದೆ, ಅಸ್ತಿತ್ವಕ್ಕಾಗಿ, ಅನನ್ಯತೆಗಾಗಿ ಬಲಿ, ಬಲಾತ್ಕಾರ, ಬೆದರಿಕೆ, ದೌರ್ಜನ್ಯ, ದಬ್ಬಾಳಿಕೆ ಮೊದಲಾದ ಅಸ್ತ್ರಗಳ ಪ್ರಯೋಗ ಅನೂಚೂನವಾಗಿನಡೆಯುತ್ತಲೇ ಬಂದಿದೆ. ಬಲವಿದ್ದವನೇ ಬದುಕಬಲ್ಲ ಎಂಬುದು ಸಾರ್ವತ್ರಿಕವಾಗಿ ಸ್ವೀಕೃತ ನಾಣ್ಣುಡಿಯಾಗಿದೆ. ವಿಕಾಸವಾದದ ಪಿತನೆಂದೇ ಪರಿಗಣಿತ ಡಾರ್ವಿನ್ ಅತಿಮುಖ್ಯವಾದ ಎರಡು ವಾದಗಳನ್ನು ಅಥವಾ ಸಿದ್ಧಾಂತಗಳನ್ನು ಮುಂದಿಡುತ್ತಾನೆ. struggle for excistence, survival of the fittest (ಅಸ್ತಿತ್ವಕ್ಕಾಗಿ ಸೆಣಸಾಟ, ಬಲಿಷ್ಠನಾದವನಿಗೇ ಉಳಿಗಾಲ)-ಎನ್ನುವ ಈ ಎರಡು ಸಿದ್ಧಾಂತಗಳ ಪ್ರಕಾರ, ಮಾಂಸಾಹಾರಿ, ಸಸ್ಯಹಾರಿ, ಬಲಿಷ್ಠ-ದುರ್ಬಲ, ಶತ್ರು-ಮಿತ್ರ ಎಂಬ ದ್ವಂದ್ವದ

* ನಂ.೫೧, 'ಹಂಸಿ', ೧ನೇ 'ಎ' ಅಡ್ಡರಸ್ತೆ, ೩೫ನೇ ಮುಖ್ಯರಸ್ತೆ, ಭವಾನಿ ಹೌಸಿಂಗ್ ಲೇ-ಔಟ್, ಬನಗಿರಿನಗರ ಬನಶಂಕರಿ ೩ನೇ ಹಂತ, ಬೆಂಗಳೂರು-೮೫.

ನೆಲೆಯಲ್ಲಿಪ್ರಾಣಿಜಗತ್ತು ಅಥವಾ ಜೀವ ಸಂಕುಲ ಜಗತ್ತು ನಿರ್ಮಾಣಗೊಂಡಿದೆ. ನೈಸರ್ಗಿಕ ಸಮತೋಲನಕ್ಕಾಗಿ ಈ ದ್ವಂದ್ವ ವ್ಯವಸ್ಥೆ ಸೃಷ್ಟಿಯ ಮೂಲದಲ್ಲಿಯೇ ಇದೆ. ಮನುಷ್ಯರ ವಿಷಯಕ್ಕೆ ಬಂದಾಗ, ಹೊರಗಿನಿಂದ ಶತ್ರು-ಮಿತ್ರ, ಪ್ರಬಲ-ದುರ್ಬಲ ಇತ್ಯಾದಿ ವ್ಯತ್ಯಾಸಗಳು ಗೋಚರವಾಗದಿದ್ದರೂ ಅವನಿಗಿರುವ ವಿಶಿಷ್ಟ ಬೌದ್ಧಿಕ, ಭೌತಿಕ ಸಾಮರ್ಥ್ಯಗಳಿಂದಾಗಿ ಮತ್ತು ಪ್ರವೃತ್ತಿ ಮೂಲದಲ್ಲಿಯೇ ಅಧಿಕಾರಶಾಹಿ ಆಕಾಂಕ್ಷೆ ಸುಪ್ತವಾಗಿರುತ್ತದೆ.

ಜಗತ್ತಿನ ಇತಿಹಾಸದಲ್ಲಿ ಸಂಭವಿಸಿದ ಸಮರಗಳು ಕೊಲೆಗಳು, ಸಾಮೂಹಿಕ ಮಾರಣ ಹೋಮ, ಆಕ್ರಮಣಗಳು ಮುಗ್ಧ, ಸಾತ್ವಿಕ, ನಿರುಪದ್ರವಿ ಜಾತಿ, ಜನಾಂಗ, ರಾಷ್ಟ್ರಗಳ ಮೇಲೆ ನಡೆದ ದಾಳಿಗಳು, ಹೇಳ ಹೆಸರಿಲ್ಲದಂತೆ ಅಳಿಸಿ ಹಾಕುವ ಹುನ್ನಾರಗಳ ಭಾಗವಾಗಿ ನಡೆದ ವಿಧ್ವಂಸಕ ಕೃತ್ಯಗಳು-ಹೀಗೆ ಎಷ್ಟೊಂದು ವಿನಾಶಕಾರಿ ಚಟುವಟಿಕೆಗಳ ಮೂಲದಲ್ಲಿರುವುದು ಅಧಿಕಾರದಾಹ, ರಾಜ್ಯ, ಸಾಮ್ರಜ್ಯದಾಹ ಮುಂತಾದವುಗಳೇ! ರಾಜಕೀಯ ನೆಲೆಯಲ್ಲಿ, ರಾಜಶಾಹಿ, ವಸಾಹತುಶಾಹಿ, ಸಾಮ್ರಾಜ್ಯಶಾಹಿ ಮೊದಲಾದ ಹೆಸರುಗಳಲ್ಲಿ ಪ್ರಬಲ ಶಕ್ತಿಗಳು, ಆಕ್ರಮಣಕಾರಿ ಪ್ರಭುತ್ವ ಶಕ್ತಿಗಳು, ಭೌತಿಕ ಆಕ್ರಮಣಗಳಿಂದ, ಬೌದ್ಧಿ ಆಕ್ರಮಣಗಳಿಂದ, ಭೌಗೋಳಿಕ ಪ್ರದೇಶಗಳನ್ನು, ರಾಷ್ಟ್ರಗಳನ್ನು ಬಗ್ಗು ಬಡಿದು ತಮ್ಮ ಅಂಕೆಯಲ್ಲಿ ಇರಿಸಿಕೊಳ್ಳುವ ನೆಲೆಯಲ್ಲಿ ರಾಜಕೀಯ ತಂತ್ರ, ಕುತಂತ್ರ, ಚಾಣಾಕ್ಷತೆಗಳಿಂದ, ರಾಜಕೀಯವಾಗಿ ಸ್ವತಂತ್ರವಾಗಿಯೇ ಉಳಿಯಲು ಅವಕಾಶ ಕಲ್ಪಿಸಿ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಜವಾಬ್ದಾರಿಗಳನ್ನು ತನ್ನ ಹೆಗಲಿಗಿರಿಸಿಕೊಂಡಂತೆ ತೋರಿಸಿಕೊಳ್ಳುತ್ತಾ, ಒಂದು ಬಗೆಯ ವಿವಶತೆಗೆ ದೂಡುತ್ತಾ, ತಮ್ಮ ಅಧೀನತೆಯೊಳಗೇ ಉಳಿಯುವಂತಹ ಅನಿವಾರ್ಯ ಪರಿಸರವನ್ನು ಸೃಷ್ಟಿಸುತ್ತವೆ. ಇದೆಲ್ಲದರ ಹಿಂದೆ ವಿಶ್ವವೇ ತನ್ನದಾಗಬೇಕು; ತನ್ನದಾಗಿಸಿಕೊಳ್ಳಬೇಕು ಎನ್ನುವ ಅದಮ್ಯ ಹಂಬಲವಿರುತ್ತದೆ. ಇಂತಹ ಹಂಬಲದ ಪರಿಣಾಮವಾಗಿಯೇ ಸಾಮ್ರಾಜ್ಯಶಾಹಿ ವಸಾಹತುಶಾಹಿ ಪ್ರಭುತ್ವಗಳು ಅಸ್ತಿತ್ವಕ್ಕೆ ಬಂದವು. ಅಲೆಕ್ಸಾಂಡರ್, ಹಿಟ್ಲರ್, ನೆಪೋಲಿಯನ್ ಮುಂತಾದವರ ಆಸೆ, ಹಂಬಲ ಕನಸುಗಳೂ ಇವೇ ಆಗಿದ್ದವು.

ಮುನ್ನೂರು ನಾನ್ನೂರು ವರ್ಷಗಳಲ್ಲಿ ನಮ್ಮೆದುರು ಕಾಣಿಸಿಕೊಂಡಿರುವ ಇಂಗ್ಲೆಂಡ್, ಫ್ರಾನ್ಸ್ ಮೊದಲಾದ ವಸಾಹತುಶಾಹಿ ರಾಷ್ಟ್ರಗಳು, ಪೌರ್ವಾತ್ಯ ರಾಷ್ಟ್ರಗಳನ್ನು ವಸಾಹತೀಕರಣಗೊಳಿಸಿ ರಾಜಕೀಯ ಅಧಿಕಾರವನ್ನಷ್ಟೇ ಹೇರದೆ, ಅಧೀನ ರಾಷ್ಟ್ರಗಳ ಭೌತಿಕ ಸಂಪತ್ತು, ಬೌದ್ಧಿಕ ಸಂಪತ್ತು, ನೈಸರ್ಗಿಕ ಸಂಪತ್ತು-ಹೀಗೆ ಸಮಸ್ತವನ್ನೂ ತಮ್ಮದಾಗಿಸಿಕೊಳ್ಳುತ್ತಾ ಅಲ್ಲಿನ ದೇಶೀಯತೆಯನ್ನು ನಾಶಮಾಡುತ್ತಾ,ಸ್ಥಳೀಯರ ಜೀವನ ಕ್ರಮ, ರೂಢಿಗತ ನಂಬಿಕೆ, ಶ್ರದ್ಧೆ, ಸಂಸ್ಕೃತಿ, ಭಾಷೆ, ಧರ್ಮ, ಸಮಾಜ, ಸಾಹಿತ್ಯ, ಸ್ಥಿತಿ-

ಗತಿ ಎಲ್ಲವನ್ನೂ ಟೀಕಿಸುತ್ತಾ ದೇಶೀಯರಲ್ಲಿಯೇ ಅವುಗಳ ಬಗ್ಗೆ ಕೀಳರಿಮೆ, ತಿರಸ್ಕಾರಗಳನ್ನು ಹುಟ್ಟು ಹಾಕುತ್ತಾ, ಅಲ್ಲಿನ ಮೌಲ್ಯಗಳ ಮೂಲೋಚ್ಚಾಟನೆ ಮಾಡುತ್ತ, ವಸಾಹತುಶಾಹಿ ಶ್ರೇಷ್ಠತೆಯನ್ನು ಉದ್ಘೋಷಿಸುತ್ತವೆ. ಜಗತ್ತಿನಲ್ಲಿ ತಮ್ಮದು ಅತ್ಯಂತ ಸುಸಂಸ್ಕೃತ, ಪ್ರಗತಿಶೀಲ, ಅಭಿವೃದ್ಧಿಶೀಲ, ನಾಗರಿಕ, ಶಿಸ್ತುಬದ್ಧವಾದ್ದರಿಂದ, ತಮ್ಮ ಅಧೀನ ವಸಾಹತು ರಾಷ್ಟ್ರಗಳಲ್ಲಿನ ಅರಾಜಕತೆ, ಅನಾಗರಿಕತೆ, ಧರ್ಮಾಂಧತೆ, ಮೌಢ್ಯ, ಅಜ್ಞಾನ, ಬರ್ಬರತೆ, ಭೋಗಲಾಲಸೆ ಇತ್ಯಾದಿ ಅವಗುಣಗಳನ್ನು ನಿವಾರಿಸಿ, ಸುಧಾರಿಸಿ, ಅಭಿವೃದ್ಧಿ ಪಡಿಸುವ ತುರ್ತಿನ ಜವಾಬ್ದಾರಿ ತಮಗಿದೆ ಎಂದು ಬೀಗುತ್ತಾ ಎಲ್ಲ ರೀತಿಯಲ್ಲಿಯೂ ನಿಯಂತ್ರಿಸುತ್ತವೆ.

ವಸಾಹತುಶಾಹಿ ಶಕ್ತಿಗಳ ಕಪಿಮುಷ್ಟಿಯಲ್ಲಿ ಸಿಲುಕಿ ಅನುಭವಿಸಿದ ಕಷ್ಟನಷ್ಟಗಳಿಂದ ಮತ್ತು ಅವು ಸೃಷ್ಟಿಸಿರುವ ಆತಂಕಕಾರಿ ಪರಿಣಾಮ, ಪ್ರಭಾವಗಳಿಂದ ಬಿಡಿಸಿಕೊಳ್ಳುವುದೇ ಒಂದು ದೊಡ್ಡ ಸಮಸ್ಯೆಯಾಗಿದೆ; ಸವಾಲೂ ಆಗಿದೆ. ಭಾರತ, ಆಫ್ರಿಕಾಗಳೇ ಇದಕ್ಕೆ ಜ್ವಲಂತ ಉದಾಹರಣೆ, ವಸಾಹತುಶಾಹಿ ಆಡಳಿತದಿಂದ ಉಂಟಾದ ಗಾಯಗಳು ಇನ್ನೂ ಮಾಗುತ್ತಿರುವಾಗಲೇ ಜಾಗತೀಕರಣದ ಹೆಸರಿನಲ್ಲಿ ನವವಸಾಹತುಶಾಹಿ ಪ್ರವೇಶವಾಗಿ ಇನ್ನಷ್ಟು ಆತಂಕಕ್ಕೆ ಎಡೆಮಾಡಿದೆ. ನಮ್ಮ ಸಮಗ್ರ ಬದುಕಿನ ದೃಷ್ಟಿಯನ್ನೇ ಬುಡಮೇಲು ಮಾಡುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ.

ವಸಾಹತುಶಾಹಿಯಿಂದ ಕಳೆದುಕೊಂಡ ಪೂರ್ವ ವಸಾಹತು ಸ್ಥಿತಿಗೆ ಹಿಂತಿರುಗಲು ಮತ್ತು ಕಲೆ, ಶಿಕ್ಷಣ, ಸಂಸ್ಕೃತಿ, ಸಾಹಿತ್ಯಗಳನ್ನು ವಸಾಹತುಶಾಹಿಯ ಸಾಂಸ್ಕೃತಿಕ ಯಾಜಮಾನ್ಯತೆಯ ಸಂಕೋಲೆಗಳಿಂದ ಬಿಡಿಸಿಕೊಳ್ಳುವ ತುರ್ತಿನ ಬಗ್ಗೆ ಎಡ್ವರ್ಡ್ ಸೈದ್, ಫ್ರಾಂಜ್ ಫ್ಯಾನನ್, ಮಿಷೆಲ್ ಫುಕೋ ಮತ್ತು ನಮ್ಮವರೇ ಆದ ಆಶಿಶ್‌ನಂದಿ ಮೊದಲಾದವರು ಗಂಭೀರ ಚಿಂತನೆ ನಡೆಸಿದ್ದಾರೆ. ನಿರ್ವಸಾಹತೀಕರಣಕ್ಕೆ ಪರ್ಯಾಯಗಳನ್ನು ಕುರಿತು ಆಲೋಚಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಎಲ್ಲ ತೃತೀಯ ಜಗತ್ತಿನ ರಾಷ್ಟ್ರಗಳು ಒಟ್ಟಿಗೆ ಸೇರಿ ಮತ್ತು ದೇಶೀಯ ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ, ವೈಜ್ಞಾನಿಕ ಕ್ಷೇತ್ರಗಳಲ್ಲಿನ ಪ್ರತಿನಿಧಿಗಳು, ಬುದ್ಧಿಜೀವಿಗಳು, ಕಲಾವಿದರು, ಪಶ್ಚಿಮಕ್ಕೆ ವಿರುದ್ಧವಾದ ಪರ್ಯಾಯ ವ್ಯವಸ್ಥೆಯೊಂದನ್ನು ಕಟ್ಟಿಬೆಳೆಸಬೇಕಾದ ಅಗತ್ಯವನ್ನು ಫ್ಯಾನನ್ ಎತ್ತಿಹಿಡಿಯುತ್ತಾನೆ. ನಮ್ಮದೇ ಆದ ಸಂಸ್ಕೃತಿ, ಚರಿತ್ರೆಯನ್ನು ರೂಪಿಸುವ, ಬೆಳೆಸುವ ಜರೂರು ಅನುಭವಕ್ಕೆ ಬರುತ್ತಿದ್ದಂತೆ, ಪ್ರಬಲ ಸಾಮ್ರಾಜ್ಯಶಾಹಿ ರಾಷ್ಟ್ರವಾದ ಅಮೆರಿಕಾ ಒಂದು ದೊಡ್ಡ ಪಡಂಭೂತದಂತೆ ವಿಶ್ವವನ್ನೇ ಆವರಿಸಿಬಿಟ್ಟಿದೆ. ವಸಾಹತುಶಾಹಿಗಿಂತ ಅಪಾಯಕಾರಿಯಾದ ರೀತಿಯಲ್ಲಿ ಆಕ್ಟೋಪಸ್‌ನಂತೆ, ಕಬಂಧನಂತೆ ತನ್ನ ಬಾಹುಗಳನ್ನು ವಿಶ್ವದ ಎಲ್ಲೆಡೆಗೂ ಚಾಚಿ, ತನ್ನತ್ತ ಸೆಳೆದುಕೊಳ್ಳುತ್ತಿದೆ; ಸೆಳೆದುಕೊಳ್ಳಲು

ಅನೇಕ ಆಮಿಷಗಳನ್ನು ಒಡ್ಡುತ್ತಿದೆ; ಕನಸುಗಳನ್ನು ಬಿತ್ತುತ್ತಿದೆ; ಭ್ರಮೆಗಳನ್ನು ಸೃಷ್ಟಿಸುತ್ತಿದೆ. ರಾಜಕೀಯವಾಗಿ ದಿಗ್ವಿಜಯ ಯಾತ್ರೆಯನ್ನು ಕೈಗೊಳ್ಳದೆ, ಅದರ ಯಾವುದೇ ಸಂಪನ್ಮೂಲಗಳಿಗೆ ಹಾನಿಯಾಗದೆ ತನ್ನ ಬುದ್ಧಿಶಕ್ತಿ,ತಂತ್ರ, ಕುತಂತ್ರಗಳಿಂದ, ರಾಜಕೀಯ ಚಾಣಾಕ್ಷತನದಿಂದ ರಾಜಕೀಯವಾಗಿ ಅಧಿಕಾರ ಕಸಿದುಕೊಳ್ಳದೆಯೇ ಇತರ ರಾಷ್ಟ್ರಗಳ ಆಂತರಿಕ ಕಲಹಗಳಲ್ಲಿ ಹಸ್ತಕ್ಷೇಪ ಮಾಡುತ್ತ, ಎಲ್ಲ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯನ್ನು ಒಗ್ಗೂಡಿಸುವ ನೆಪದಲ್ಲಿ, ಜಾಗತೀಕರಣ ಅಥವಾ ನವ ವಸಾಹತುಶಾಹಿ, ಸಾಮ್ರಾಜ್ಯಶಾಹಿ ಸಾರ್ವಭೌಮತ್ವವನ್ನು ಹೇರುತ್ತಿದೆ. ವಿಶ್ವ ಅಭಿವೃದ್ಧಿ, ಭದ್ರತೆಗಳ ಜವಾಬ್ದಾರಿಯನ್ನು ತನ್ನದೆಂದು ಸ್ವಯಂಘೋಷಿಸಿಕೊಂಡು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ನಡವಳಿಕೆಯ ನೀತಿ ಪಾಠಗಳನ್ನು ಹೇಳಲು ಮುಂದಾಗುತ್ತಿದೆ. ನೆರವು, ರಕ್ಷಣೆಗಳ ಸಬೂಬುಗಳನ್ನು ಹೇಳಿಕೊಂಡು ತನಗೆ ಉಚಿತವೆನಿಸಿದಾಗಲೆಲ್ಲ ಅಪಾರಸೈನ್ಯ ಬಲವನ್ನು ಕಳಿಸಿಕೊಟ್ಟು ಇಲ್ಲಸಲ್ಲದ ಉಪದ್ವ್ಯಾಪಗಳನ್ನು ಸೃಷ್ಟಿಸುತ್ತಿದೆ. ಜೊತೆಗೆ, ಆರ್ಥಿಕ ನಿಯಂತ್ರಣದೊಂದಿಗೇ ಸಾಮಾಜಿಕ, ಸಾಂಸ್ಕೃತಿಕ ನಿಯಂತ್ರಣವನ್ನೂ ಅತ್ಯಂತ ಸೂಕ್ಷ್ಮ ರೀತಿಯಲ್ಲಿ ಥಟ್ಟನೆ ಅರಿವಿಗೆ ಬಾರದಂತೆಯೇ ಸಾಧಿಸುತ್ತಿದೆ. ಅಮೆರಿಕಕ್ಕೆ ಸಿಕ್ಕಿರುವ ಮತ್ತೊಂದು ವರದಾನವೆಂದರೆ ಎಲೆಕ್ಟ್ರಾನಿಕ್ ಮಾಧ್ಯಮಗಳೆಂಬ ಅಸ್ತ್ರಗಳು. ಇವುಗಳ ನೆರವಿನಿಂದ ವಿಶ್ವದ ಎಲ್ಲ ಭಾಗಗಳ ಆಗುಹೋಗುಗಳನ್ನೂ ರಹಸ್ಯವಾಗಿ ದಾಖಲಿಸುತ್ತಾ ಹೋಗುತ್ತಿರುವುದು ಮತ್ತೂ ಅಪಾಯಕಾರಿಯಾದ ಬೆಳವಣಿಗೆಯಾಗಿದೆ. ಯಾವ ರಾಷ್ಟ್ರಕ್ಕೇ ಸಂಬಂಧಪಟ್ಟ ಅತ್ಯಂತ ರಹಸ್ಯಮಯ ಮಾಹಿತಿಗಳನ್ನೂ ಸಂಗ್ರಹಿಸಿಕೊಳ್ಳಲು ಸಾಧ್ಯವಾಗಿ ತನಗೆ ಬೇಕಾದಾಗ ಬೆದರಿಕೆಗೆ ಬಳಿಸಿಕೊಳ್ಳಲು ಪ್ರಯತ್ನಿಸಬಹುದು.

ವಸಾಹತುಶಾಹಿಯಿಂದ ಒಗ್ಗೂಡಿಸಿಕೊಂಡ ಸಾಂಸ್ಕೃತಿಕ, ಮಾನಸಿಕ, ಬೌದ್ಧಿಕ ದಾಸ್ಯದಿಂದ ಬಿಡಿಸಿಕೊಳ್ಳಲಾಗದ ಸ್ಥಿತಿಯಲ್ಲಿರುವಾಗಲೇ ಭೋಗ ಸಂಸ್ಕೃತಿ, ಕೊಳ್ಳುಬಾಕಸಂಸ್ಕೃತಿಯ ದಾಸರಾಗುತ್ತಿದ್ದೇವೆ. ಮುಕ್ತ ಮಾರುಕಟ್ಟೆ ಹೆಸರಿನಲ್ಲಿ ಬೇಕು ಬೇಡದ, ತನ್ನ ನಿರೀಕ್ಷೆಯಲ್ಲಿ ಗುಣಮಟ್ಟ ಹೊಂದಿರದ ಎಲ್ಲ ಬಗೆಯ ವಸ್ತುಗಳನ್ನು (ಆಹಾರೋತ್ಪನ್ನ–ಗೃಹೋಪಯೋಗಿ ಎಲೆಕ್ಟ್ರಾನಿಕ್ ಸಾಧನಗಳನ್ನು, ವಸ್ತ್ರೋಪಕರಣಗಳನ್ನು ಇತ್ಯಾದಿ) ಹೆಜ್ಜೆ ಹೆಜ್ಜೆಗೊಂದೊಂದರಂತೆ ಮಾಲ್‌ಗಳನ್ನು ಪ್ರಾರಂಭಿಸಿ, ಒಂದೇ ಸೂರಿನಡಿಯಲ್ಲಿ ಅಗತ್ಯ ಸರಕುಗಳೆಲ್ಲವೂ ಲಭ್ಯವಾಗುವಂತಹ ವ್ಯವಸ್ಥೆಯ ಮೂಲಕ, ಗ್ರಾಹಕರು ಬೇರೆಡೆಗೆ ಹೋಗದಂತೆ ಕಟ್ಟಿ ಹಾಕುತ್ತಿದೆ. ಇದರಿಂದಾಗಿ ಸಣ್ಣಪುಟ್ಟ ಅಂಗಡಿ, ಮಳಿಗೆಗಳು, ಕಿರಾಣಿ ಅಂಗಡಿಗಳು ಉದ್ಯಮಗಳು ನೆಲಕಚ್ಚುವಂತಾಗಿದೆ. ಒಂದು ರೀತಿಯಿಂದ ಹೇಳುವುದಾದರೆ, ಕೃಷಿಯಿಂದ ಮೊದಲ್ಗೊಂಡು, ಉದ್ಯಮಗಳು ಕೈಗಾರಿಕೆಗಳು,ವ್ಯಾಪಾರ ವಹಿವಾಟು, ಕಡೆಗೆ ನಾವು ತಿನ್ನುವ ಆಹಾರ ಪದಾರ್ಥಗಳು, ಕುಡಿಯು ನೀರು, ಬೀರು, ಪೇಯಗಳು ಎಲ್ಲವೂ ನಿಯಂತ್ರಣಕ್ಕೆ ಒಳಗಾಗುತ್ತಿವೆ. ನಮ್ಮ

ಜೀವನಶೈಲಿಯನ್ನು ನಿರ್ಧರಿಸುವುದೂ ಅದರದೇ ಹೊಣೆಯಾದಂತಿದೆ. ಮೂರ್ತ, ಅಮೂರ್ತ ರೀತಿಯಲ್ಲಿ ಜಾಗತೀಕರಣ ಅಥವಾ ನವವಸಾಹತೀಕರಣಕ್ಕೆ ಎಷ್ಟರ ಮಟ್ಟಿಗೆ ಒಳಗಾಗಿದ್ದೇವೆಂದರೆ ಅದರಿಂದ ಬಿಡಿಸಿಕೊಂಡು ಬದುಕುವುದಕ್ಕೇ ಸಾಧ್ಯವಾಗದಂತಹ ಅಸಹಾಯಕತೆಗೆ, ವಿವಶತೆಗೆ ಒಳಗಾಗಿದ್ದೇವೆ. ನವವಸಾಹತುಶಾಹಿ ಪ್ರಭುತ್ವವನ್ನು ಒಪ್ಪಿಕೊಂಡಲ್ಲದೆ, ಹೊಂದಿಕೊಂಡು ಹೋಗುವುದಲ್ಲದೆ ಅನ್ಯಮಾರ್ಗವೇ ಇಲ್ಲದಂತಾಗಿದೆ. ಅದು ನಮ್ಮ ಈ ವರ್ತಮಾನ ಬದುಕಿನ ಅನನ್ಯ ಭಾಗವಾಗಿದೆ. ಆದ್ದರಿಂದ ಈ ನವವಸಾಹತುಶಾಹಿಯನ್ನು ಪ್ರತಿರೋಧಿಸುವ ಪ್ರಶ್ನೆಯೇ ಇಲ್ಲ !

ಸಂಕ್ಷೇಪವಾಗಿ ಹೇಳುವುದಾದರೆ ಜಾಗತೀಕರಣ ಅಥವಾ ನವವಸಾಹತುಶಾಹಿ ಜಗತ್ತಿನ ಮುಂದೆ ಒಂದು ಭ್ರಮಾತ್ಮಕ ಸ್ವರ್ಗವನ್ನು ಸೃಷ್ಟಿ ಮಾಡಿದೆ. ಹಸಿವು, ಬಡತನ, ವರ್ಗ, ಜಾತಿ, ತಾರತಮ್ಯಗಳಾಗಲೀ, ಧಾರ್ಮಿಕ ಸಂಘರ್ಷಗಳಾಗಲೀ ಇರುವುದೇ ಇಲ್ಲವೆಂಬ ಹುಂಬ ನಂಬಿಕೆಯನ್ನು ಹುಟ್ಟುಹಾಕಿದೆ. ಈ ಸಂದರ್ಭದಲ್ಲಿ ಮನು ಚಕ್ರವರ್ತಿ ಅವರು ತಮ್ಮ 'ಜಾಗತೀಕರಣ ಮತ್ತು ಭಾರತ' ಲೇಖನದಲ್ಲಿ, ಎರಿಕ್‌ಹಾಬ್‌ಸ್ಟಾಮ್‌ರ ಮಾತುಗಳನ್ನು (ಜಾಗತೀಕರಣ ಕುರಿತಂತೆ) ಹೀಗೆ ಉದ್ಧರಿಸಿದ್ದಾರೆ. "ಜಾಗತೀಕರಣದ ಪ್ರಮುಖ ಸಮಸ್ಯೆಯೆಂದರೆ ಅದು ಸಹಜವಾಗಿಯೇ ಅಸಮಾನವೂ ವೈವಿಧ್ಯಮಯವೂ ಆಗಿರುವ ಒಂದು ಜಗತ್ತಿನಲ್ಲಿ ಎಲ್ಲ ವಸ್ತುಗಳೂ ಎಲ್ಲರಿಗೂ ಸಮಾನವಾದ ನೆಲೆಯಲ್ಲಿ ದೊರಕಬಲ್ಲವೆಂಬ ತಾತ್ಕಾಲಿಕ ಆಶ್ವಾಸನೆಯೊಂದನ್ನು ನಿರ್ಮಿಸಿಕೊಡುತ್ತದೆ ಮತ್ತು ಈ ಎರಡು ಅಮೂರ್ತ ತತ್ವಗಳ ನಡುವೆ ಸಂಘರ್ಷ ಅನಿವಾರ್ಯವಾಗಿಯೇ ಉದ್ಭವಿಸುತ್ತದೆ'- ಎನ್ನುವುದು ಅಭಿಪ್ರಾಯ.

ವಿಶ್ವವನ್ನೇ ಒಂದಾಗಿಸುವ, ಒಟ್ಟುಗೂಡಿಸುವ ಮಹೋನ್ನತ ಆದರ್ಶದ ಹಿನ್ನೆಲೆಯಲ್ಲಿ ಚಾಲ್ತಿಗೆ ಬಂದ ಜಾಗತೀಕರಣ ಪ್ರಕ್ರಿಯೆ ವಿಶ್ವವನ್ನೇ ಒಂದು ಗ್ರಾಮವಾಗಿ ಪರಿಭಾವಿಸುವ ದೃಷ್ಟಿ ಎಷ್ಟರ ಮಟ್ಟಿಗೆ ಸಾರ್ಥಕವಾಗಿದೆ? ಎನ್ನುವ ಪ್ರಶ್ನೆಗೆ ಉತ್ತರ ಬಹುಶಃ ಸರಳವಲ್ಲ. ವಿಶ್ವಗ್ರಾಮ ಪರಿಕಲ್ಪನೆಯಲ್ಲಿ, ಕೃಷಿಯನ್ನೇ ಪ್ರಧಾನವಾಗಿ ಅವಲಂಬಿಸಿರುವ ಗ್ರಾಮಗಳೇ ದೈನ್ಯಾತಿದೈನ್ಯ ಸ್ಥಿತಿಯಲ್ಲಿವೆ. ಜಾಗತೀಕರಣದ ಕೊಡುಗೆಯಾಗಿ ಬರುವ ಕೃತಕ ಬೀಜಗಳು, ಅತಿಯಾದ ವಿದೇಶಿ ರಸಗೊಬ್ಬರದ ಬಳಕೆಯಿಂದಾಗಿ ಭೂಮಿಯೇ ಬರಡಾಗುತ್ತಿದೆ. ಇನ್ನು ನೀರೋ ಕಲುಷಿತಗೊಂಡು ಎಲ್ಲ ಬಗೆಯ ಆತಂಕಗಳಿಗೆ ದಾರಿ ಮಾಡುತ್ತಿರುವಾಗ ಗ್ರಾಮಗಳು ಸಂಪನ್ನವಾಗುವುದಾದರೂ ಹೇಗೆ ?

ಬೇಡದ್ದನ್ನೆಲ್ಲಾ ತಂದು ರಾಶಿ ಹಾಕುವ ಹುನ್ನಾರಗಳ ಭಂಡಾರವನ್ನೇ ಎದೆಯಾಂತರಾಳದಲ್ಲಿ ಹುದುಗಿಟ್ಟುಕೊಂಡಿರುವ ಜಾಗತೀಕರಣದ ಮೂಲಕ ವಿಶ್ವಕಲ್ಯಾಣ, ವಿಶ್ವದ ಅಭಿವೃದ್ಧಿ ಸಾಧ್ಯವಾಗಬಹುದೆಂಬ ಚಿಂತನೆಯ ಬಗ್ಗೆಯೇ ಗುಮಾನಿ ಹುಟ್ಟುತ್ತದೆ.

ಸಮಾಜವಾದಿ ಚಿಂತಕರಾದ ಕಿಷನ್ ಪಟ್ನಾಯಕ್‌ರು ಜಾಗತೀಕರಣ ಕುರಿತು ತಮ್ಮ ನಿಲುವನ್ನು ಹೀಗೆ ವ್ಯಕ್ತಪಡಿಸುತ್ತಾರೆ. "ಇದು ಎಲ್ಲವನ್ನೂ ಒಳಗೊಳ್ಳುವ ಸಿದ್ಧಾಂತವಲ್ಲ; ಕೆಲವರಿಗಾಗಿ ಅನೇಕರನ್ನು ಹೊರಗಿಡುವ ಸಿದ್ಧಾಂತ. (Theory of exclusion) ತೋರಿಕೆಯ ಮಟ್ಟಿಗೆ ಈ ಮಾದರಿ. ಸಮಸುಖೀ ರಾಜ್ಯದ (welfare state) ಆದರ್ಶವಿಟ್ಟುಕೊಂಡಿದೆಯೇ ವಿನಾ ಇಲ್ಲಿ ಸೆಮಷ್ಠಿ ಹಿತದ ಸಾಮಾಜಿಕ ದರ್ಶನವೆ ಇಲ್ಲ" ಎನ್ನುತ್ತಾರೆ.

ಹೀಗೆ ತೋರಿಕೆಯಲ್ಲಿ, ಜಗತ್ತಿನ ಕಲ್ಯಾಣ, ಒಗ್ಗೂಡಿಕೆ, ಹಿತ ಚಿಂತನೆಗಳನ್ನು ಬಿಂಬಿಸಿ, ಆಂತರ್ಯದಲ್ಲಿ ಜಗತ್ತನ್ನೇ ತನ್ನ ಪ್ರಭುತ್ವಶಕ್ತಿಗೆ ಅಧೀನವಾಗಿಸಿಕೊಳ್ಳುತ್ತಿರುವ ಜಾಗತೀಕರಣ ಅಥವಾ ನವವಸಾಹತುಶಾಹಿ ಬೆಳಕಲ್ಲಿ ಪಂಪನ ಆದಿಪುರಾಣವನ್ನು ಓದಿಗೆ ಒಳಪಡಿಸಿಕೊಂಡಾಗ, ರಾಜ್ಯಶಾಹಿ, ಸಾಮ್ರಾಜ್ಯಶಾಹಿ ಹಂಬಲಗಳ ನಿರಂತರತೆಯೂ, ಪ್ರಭುಶಕ್ತಿ ಅಥವಾ ರಾಜಶಾಹಿ, ಸಾಮ್ರಾಜ್ಯಶಾಹಿಗಳ ಅಧೀನತೆಯಲ್ಲಿನ ಸಂಕಟಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಪಂಪ ಒಂದು ಕಡೆ ವಿಕ್ರಮಾರ್ಜುನ ವಿಜಯದಲ್ಲಿ, ಪ್ರಭುಶಕ್ತಿಯ ಅಧೀನತೆಯ ಸಂಕಟವನ್ನು ಸ್ವಾನುಭವದ ಮೂಲಕ ತೋಡಿಕೊಂಡಿದ್ದಾನೆ. ಅಭಿಮಾನಧನನಾದರೂ, ಅರಸರ ಸ್ವಭಾವ ಚಾಂಚಲ್ಯವನ್ನು, ಅವರು ಬಯಸಿದಲ್ಲಿ ಏನನ್ನು ಬೇಕಾದರೂ ಮಾಡಬಲ್ಲರೆಂಬುದನ್ನು ಬಲ್ಲವನಾಗಿದ್ದವನು. ಅರಿಕೇಸರಿಯ ಆಶ್ರಯದಲ್ಲಿದ್ದುಕೊಂಡೇ, ಅವನ ಹಂಗಿಗೆ ಬಿದ್ದೇ ಬೆಳೆಯುತ್ತಾನೆ. ಆಳರಸರೆಂಬ ಭೇದ ಒಂದಲ್ಲ ಒಂದು ಸಲ ಅರಿವಿಗೆ ಬರುತ್ತದೆ. ರಾಜರು ಅತಿ ಚಪಲರು, ಬೇಕಾದವರನ್ನು ಏರಿಸಿಕೂರಿಸುವಂತೆ ಬೇಡವಾದಾಗ ಹೇಳ ಹೆಸರಿಲ್ಲದೆ ಹೊಸಕಿ ಹಾಕಿಯೂ ಬಲ್ಲರು. ಎಂದಿಗೂ ಅವರು ವಿಶ್ವಾಸಾರ್ಹರಲ್ಲ, ಹಿಡಿದ ಕೈಬಿಡಬಲ್ಲರು; ಬಿಟ್ಟ ಕೈ ಹಿಡಿಯಬಲ್ಲರು. ಒಂದು ತತ್ವ, ನೀತಿ, ಸಿದ್ಧಾಂತಗಳಿಗೆ ಬದ್ಧವಾಗುವುದು ಪ್ರಭುಶಕ್ತಿಯ ಜಾಯಮಾನದಲ್ಲಿಯೇ ಇರಲಾರದು.

ಕಲಿಯನೆ ಪಂದೆ ಮಾಟ್ಪಿ ಕಡುವಂದೆಯನೊಳ್ಗಲಿ ಮಾಟ್ಪಿ ತಕ್ಕನಂ ಪೊಲೆಯನಿ ಮಾಳ್ಪ ಮುಂ ಪೊಲೆಯನಂ ನೆಜಿತಕ್ಕನೆ ಮಾಟ್ಪಿತಮ್ಮೊಳಗ್ಗಲಿಸಿ ಪೊದಜ್ದು ಪರ್ವಿದ ವಿವೇಕತೆಯಿಂ ನೃಪಚಿತ್ತವೃತ್ತಿ ಸಂಚಲಮುದರಿಂದಮೋಲಗಿಸಿ ಬಾಟ್ವುದೆ ಕಷ್ಟಮಿಳಾಧಿನಾಥರಂ ॥–ಎನ್ನುವುದು ಅವನ ಅನುಭವದ ಈ ಉಕ್ತಿಗಳು ಭರತೇಶನ ಪ್ರಸಂಗಕ್ಕೆ ಕೀಲಿಕೈಯಾಗಿದೆ.

ಮೂಲಭೂತವಾಗಿ ಇದೊಂದು ಧಾರ್ಮಿಕ ಕಾವ್ಯವಾದರೂ ಧಾರ್ಮಿಕ–ಲೌಕಿಕಗಳೆರಡರ ಮುಖಗಳನ್ನೂ ಪರಿಚಯಿಸುತ್ತಾನೆ. ಧರ್ಮವಿಜಯವು, ದಿಗ್ವಿಜಯುಗಳೆರಡೂ ಪರಸ್ಪರ ಪೂರಕವಾಗುವಂತೆಯೂ ಮುಖಾಮುಖಿಯಾಗುವಂತೆಯೂ ಒಟ್ಟಿಗೆ ಕಾವ್ಯದಲ್ಲಿ ತಂದು ಹೆಣೆದಿದ್ದಾನೆ.

ಇದು ಧಾರ್ಮಿಕ ಕಾವ್ಯವಾದ್ದರಿಂದ, ಅದೂ ಜೈನಧರ್ಮವನ್ನು ಪ್ರತಿನಿಧಿಸುವ

ಕಾವ್ಯವಾದ್ದರಿಂದ ಜೈನಧರ್ಮದ ಮೌಲ್ಯಗಳನ್ನು ಅದರ ಕೆಲವು ಪರಿಕಲ್ಪನೆಗಳನ್ನು ಸಂದರ್ಭಗಳ ಹಿನ್ನೆಲೆಯಲ್ಲಿ ವಿವರಿಸಿದ್ದಾನೆಯೇ ಹೊರತು, ಶುಷ್ಕ, ನೀರಸ, ತತ್ವ ಬೋಧನೆಗಳಿಂದ ಕಾವ್ಯವನ್ನು ಪೆಡಸಾಗಿಸಿಲ್ಲ. ಧಾರ್ಮಿಕ ದೃಷ್ಟಿಯ ಹಿನ್ನೆಲೆಯಲ್ಲಿಯೇ ಬದುಕನ್ನು ಸಮಗ್ರವಾಗಿ ಗ್ರಹಿಸಲಾಗಿದೆ. ಆದಿ ತೀರ್ಥಂಕರ ವೃಷಭನಾಥ ಹುಟ್ಟು ಪಲಾಯನವಾದಿಯಲ್ಲ; ಜೀವನ ವಿಮುಖತೆಗೆ ಒಳಗಾದವನಲ್ಲ. ಶಕ್ತಿ ಸಾಮರ್ಥ್ಯಗಳಿಂದ ಅನೂಚಾನವಾಗಿ ದಕ್ಕಿದ ಷಟ್ಖಂಡ ಸಮ್ರಾಜ್ಯವನ್ನು ಆಳಿದವನು. ಜನ್ಮ ಜನ್ಮಾಂತರಗಳಲ್ಲೂ ಭೋಗದ ಪರಾಕಾಷ್ಠೆಯನ್ನು ಅನುಭವಿಸಿದವನು. ಅವನಲ್ಲಿಯೂ ರಾಜ್ಯಲಾಲಸೆ, ಭೋಗಲಾಲಸೆಗಳು ಮನೆಮಾಡಿರುತ್ತವೆ. ಆದರೆ ಯಾವುದೋ ಒಂದು ಕ್ಷಣದಲ್ಲಿ ಬದುಕಿನ ಕ್ಷಣ ಭಂಗುರತೆ; ನಿಸ್ಸಾರತೆಯ ಅರಿವಿನೊಂದಿಗೆ, ಶಾಶ್ವತ ಸುಖವನ್ನು ನೀಡಬಲ್ಲ ಮೋಕ್ಷಮುಖಿಯಾಗಿ ಧರ್ಮಮುಖಿಯಾಗಿ ಹೊರಡುವಲ್ಲಿ, ಯಾವುದೇ ಲೌಕಿಕ ನಂಟುಗಳು, ಆಸೆ ಆಮಿಷಗಳು ಅವನನ್ನು ಚಿತ್ತ ಚಾಂಚಲ್ಯಕ್ಕೆ ಒಳಗಾಗಿಸುವುದಿಲ್ಲ. ಅಲ್ಲಿಯವರೆಗೆ ಅನುಭವಿಸಿದ ಭೋಗಭಾಗ್ಯಗಳ ನೆನಪೂ ಕಾಡುವುದಿಲ್ಲ.

ಆದರೆ ಇದಕ್ಕೆ ತದ್ವಿರುದ್ಧವಾಗಿ ಪಂಪ, ಇಂತಹ ನಿರ್ಮೋಹಿ ನಿರ್ವಿಕಲ್ಪ ಸ್ಥಿತಿಯನ್ನು ಸಾಧಿಸಿಕೊಂಡಿರುವ ವೃಷಭದೇವನ ಮಗನಾದ ಭರತನನ್ನು, ಇವತ್ತಿನ ಸಾಮ್ರಾಜ್ಯಶಾಹಿ, ನವವಸಾಹತುಶಾಹಿಗೆ ರೂಪಕವಾಗುವಂತಹ ರೀತಿಯಲ್ಲಿ ಚಿತ್ರಿಸಿದ್ದಾನೆ. ಜಾಗತೀಕರಣ ಅಥವಾ ನವವಸಾಹತುಶಾಹಿ ಮೂಲದಲ್ಲಿರುವ 'ಅಹಂ' ಮತ್ತು ಆಕ್ರಮಣ ಪ್ರವೃತ್ತಿಗಳನ್ನು ಇಲ್ಲಿನ ಭರತ ಮೈಗೂಡಿಕೊಂಡಿದ್ದಾನೆ. ಷಟ್ಖಂಡಗಳನ್ನು ಗೆದ್ದು, ಇಡೀ ಭೂಮಂಡಲವನ್ನೇ ತನ್ನದಾಗಿಸಿಕೊಳ್ಳಬೇಕು; ಏಕ ಚಕ್ರಾಧಿಪತ್ಯಕ್ಕೆ ಒಳಪಡಿಸಿಕೊಳ್ಳಬೇಕು. ತನ್ನೊಡೆತನದಲ್ಲಿ ಭೂಮಂಡಲದ ಎಲ್ಲರ ರಾಜರೂ ತನ್ನಾದೇಶಗಳನ್ನು ಪಾಲಿಸಬೇಕು; ತನ್ನಾಡಳಿತಕ್ಕೆ ಅಧೀನರಾಗಿ, ಏಕರೂಪಿಯಾದ ಸಂಸ್ಕೃತಿ ಪರಿಸರವನ್ನು ರೂಪಿಸಬೇಕು. ತನ್ನನ್ನು ಎದುರಿಸುವ, ವಿರೋಧಿಸುವ, ಪ್ರತಿಭಟಿಸುವ, ದಂಗೆಯೇಳುವ ಉದ್ಧಟತನವನ್ನು ಸಹಿಸಲಾರದ, ಕ್ಷಮಿಸಲಾರದ ಮನಃಸ್ಥಿತಿ ಅವನದು. ಭೂಮಂಡಲದ ಮೇಲೆ ಏಕ ಸ್ವಾಮ್ಯತ್ವ ಸ್ಥಾಪಿಸಿ ಸಮಸ್ತ ಮಾನವರನ್ನು, ಜೀವ ಸಂಕುಲವನ್ನು, ನಿಸರ್ಗ ಸತ್ವಗಳೆಲ್ಲವನ್ನೂ ಮಣಿಸಿ, ತನ್ನಧೀನವಾಗಿಸಿಕೊಂಡು, ತನ್ನಾದೇಶಗಳ ಅನುಶಾಸನದ ನೊಗಕ್ಕೆ ಹೂಡಿ ನಡೆಸಿಕೊಳ್ಳುವ ಅಧಿಕಾರಶಾಹಿ ಧೋರಣೆ ಅವನಲ್ಲಿ ಮಡುಗಟ್ಟಿದೆ.

ಈ ಅಧಿಕಾರಶಾಹಿ ಧೋರಣೆಯೆದುರಲ್ಲಿ ಅಣ್ಣ, ತಮ್ಮ, ಅಕ್ಕ, ತಂಗಿ, ಬಂಧುಬಾಂಧವರು, ಸ್ನೇಹಿತರು-ಎಂಬ ಯಾವುದೇ ಸಂಬಂಧಗಳು ಮುಖ್ಯವೆನಿಸುವುದಿಲ್ಲ. ಆಯುಧಾಗಾರದಲ್ಲಿ ಹುಟ್ಟುವ 'ಚಕ್ರರತ್ನ' ಅವನ ಅಹಂಕಾರದ ಪ್ರತೀಕವಾಗುತ್ತದೆ. ಇದನ್ನೇ ಒಂದು ಬೆದರಿಕೆಯ ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ ಮತ್ತು

ದಿಗ್ವಿಜಯಕ್ಕೆ ಹೊರಟಾಗ ಅದು ಮುಂದಾಗಿ ಸಂದೇಶ ವಾಹಕವಾಗಿಯೂ, ಎಚ್ಚರಿಕೆಯ ಗಂಟೆಯಾಗಿಯೂ ಕೆಲಸಮಾಡುತ್ತದೆ. ಅಷ್ಟಮದಗಳನ್ನು ತುಂಬಿಕೊಂಡ ಅವನಿಗೆ ಯಾರೊಬ್ಬರೂ ಸೆಡ್ಡು ಹೊಡೆದು ನಿಲ್ಲಬಾರದು.ಗರ್ವ, ಅಸಹನೆ, ಅಧಿಕಾರದಾಹಗಳನ್ನು ತುಂಬಿಕೊಂಡು ಹೊರಟವನಿಗೆ ಭೂಮಂಡಲವೆಲ್ಲವೂ ತನ್ನಧೀನವಾಗುವವರೆಗೂ ಅವನಿಗೆ ನೆಮ್ಮದಿಯಿಲ್ಲವಾಗುತ್ತದೆ. ತಂದೆ ಭೋಗಭೂಮಿಯ ವಿಮುಖತೆಗೆ ಒಳಗಾಗಿ ನಡೆದರೆ ಇವನು ಇದಕ್ಕೆ ತದ್ವಿರುದ್ಧವಾಗಿಭೋಗಭೂಮಿಗಳ ಬೆನ್ನುಹತ್ತಿಹೋಗುತ್ತಾನೆ.

ಸಾಮ್ರಾಜ್ಯಶಾಹಿಗಿರುವ ಹಲವು ಮುಖಗಳಲ್ಲಿ ಉದ್ಧಟತನವೂ ಒಂದು. ಅವನ ಉದ್ಧಟತನದ ಅತಿರೇಕ ಹಲವು ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತವೆ. ಪಂಪನು ವರ್ಣಿಸಿರುವ ಕೆಲವು ಪ್ರಸಂಗಗಳು, ಭರತನ ಅಹಂಕಾರ, ಆಕ್ರಮಣಶೀಲತೆ ಮತ್ತು ದಮನ ಪ್ರವೃತ್ತಿಗೆ ಒಡ್ಡಿದ ಪ್ರತಿಮೆಗಳಾಗಿವೆ.

ಬಾಲ್ಯದಲ್ಲಿರುವಾಗಲೇ ಅರಮನೆಯ ಸೇವಕಿಯ ಮಗನನ್ನುವೇಷದ ಆನೆ ಮಾಡಿ, ಕೃತಕವನ ಪ್ರವೇಶಿಸಿ ನಡೆಸಿದ ದಾಂಧಲೆ, ಉತ್ಪಾತಗಳು ಮುಂದಿನ ಅವನ ದಿಗ್ವಿಜಯ ನಡೆಯ ಪೂರ್ವಮಾದರಿಗಳಾಗಿವೆ. ಪಂಪನು, ಭರತ ಬಾಲ್ಯಾವಸ್ಥೆಯಲ್ಲಿಯೇ ಎಸಗಿದ ವಿಧ್ವಂಸಕ ಕಾರ್ಯಗಳನ್ನು ಗದ್ಯಭಾಗವೊಂದರಲ್ಲಿ ಹೀಗೆ ವಿವರಿಸಿದ್ದಾನೆ. "ಮದಾಂಧವಿಜಯ ಸಿಂಧೂರೀ ಕೃತನಂ ದಶೈಕಾದಶ ವರ್ಷ ದೇಶೀಯನುಂ ಅಂತಃಪುರದಾ ಸೇವಕನನ್ನು" ಮದ್ದಾನೆಯೆಂದು ಭಾವಿಸಿ, ಅವನನ್ನು ಏರಿಕೊಂಡು,

"ಕೃತಕ ಗಿರಿ ಶಿಖರಂಗಳಂ ಗಿರಿದುರ್ಗೋತ್ತುಂಗ ಶಿಖರಗಳೆಂದು ಪಾಯಿಸಿಯು, ಅತಿನಿಬಿಡ ಬಾಳಕದಳೀ ಷಂಡಂಗಳಂ ವನದುರ್ಗಂಗಳೆಂದೆ ಪಡಲ್ಪಡಿಸಿಯುಂ, ಶತಸಹಸ್ರಮುಖಾವಹಜಾನುದಘ್ನ ದೀರ್ಘಿಕಾಂಭ; ಕುಲ್ಯಾಪ್ರವಾಹಂಗಳಂ ಜಲದುರ್ಗಗಳೆಂದೆ ನೂಂಕಿ... ಉದ್ದಂಡ ಪುಂಡರೀಕಂಗಳಂ ಶ್ವೇತಾಪತ್ರಗಳೆಂದೇ ಮಾಡಿ ಪಿಡಿಸಿಯುಂ...." ಹೀಗೆ ಸಾಗುವ ಅವನ ವಿಧ್ವಂಸಕ ಕೃತ್ಯಗಳಿಂದ ಎಳೆಬಾಳೆವನಗಳು, ಕೆಂದಾವರೆ ಕೊಳಗಳು, ಕೃತಕಗಿರಿಶಿಖರಗಳು ಎಲ್ಲವೂ ನೆಲಸಮವಾಗುತ್ತವೆ. ಕೆಂದಾವರೆಗಳನ್ನು ಶತ್ರುರಾಜರ ತಲೆಗಳೆಂದು ಭಾವಿಸಿ ತುಳಿಸುವಂತೆಯೂ ಉದ್ಧನಾಳದ ಬಿಳಿಕಮಲಗಳನ್ನು ಶ್ವೇತಚ್ಛತ್ರಗಳೆಂದು ಭಾವಿಸಿ ಹಿಡಿಸಿದನೆಂದೂ, ವಿವರಿಸಿದ ಕವಿಯ ಮಾತುಗಳಲ್ಲಿ, ಭರತನಿಗಿದ್ದ ಅಧಿಕಾರಶಾಹಿ, ಆಕ್ರಮಣಶೀಲ ಮನೋವೃತ್ತಿಯ ಸ್ಪಷ್ಟ ನಿರ್ದೇಶವಿದೆ. ಇಂತಹಸ್ವಭಾವ, ಪ್ರವೃತ್ತಿಗಳ ಮೂಲಕ ತನ್ನ ಭವಿಷ್ಯಕ್ಕೆ ತಾನೇ ಭಾಷ್ಯ ಬರೆಯುತ್ತಿರುವಂತೆ ಶೌರ್ಯ, ಸಾಹಸ, ದರ್ಪಗಳನ್ನು ಪ್ರದರ್ಶಿಸುತ್ತಾನೆ.

ಭೂಮಂಡಲ ಒಡೆತನವಷ್ಟೇ ಅಲ್ಲ ಭೂಮಿಯ ಮೇಲಿನ ಅಣುಅಣುವೂ ತನ್ನದು, ತನಗಾಗಿ ಎನ್ನುವುದರ ಜೊತೆಗೆ ನಿಸರ್ಗ ಸತ್ವಗಳೆಲ್ಲವೂ ತನಗಾಗಿ ತಮ್ಮ ಸ್ವಭಾವ

ಧರ್ಮಗಳನ್ನು ನಿರ್ವಹಿಸುತ್ತಿವೆ ಎಂದೇ ಭಾವಿಸುತ್ತಾನೆ. ದಿಗ್ವಿಜಯ ಯಾತ್ರೆಯ ಸಂದರ್ಭದಲ್ಲಿ, ತನ್ನ ಬೆನ್ನಹಿಂದೆ ವಿಸ್ತೃತ ಭೋಗ ಸಾಮ್ರಾಜ್ಯವನ್ನೇ ಕಟ್ಟಿಕೊಂಡು ಹೊರಡುತ್ತಾನೆ. ಹೋಗುತ್ತಿರುವುದು ಹೋರಾಟಕ್ಕೇ ಆದರೂ ಭೋಗವಿಲಾಸಗಳಿಗೆ ಒಂದಿನಿತೂ ಕುಂದುಂಟಾಗಬಾರದೆಂಬಂತೆ ತನ್ನೊಡನೆ, ಚತುರಂಗ ಬಲದಷ್ಟೇ ಅಪಾರ ಸಂಖ್ಯೆಯಲ್ಲಿ ಗೆಳಯರನ್ನು, ಗಣಿಕೆಯರನ್ನು, ಗಾಯಕರನ್ನು, ಬಾಣಸಿಗರನ್ನು, ವಂದಿಮಾಗದರನ್ನು ಜೊತೆಗೆ ಅವನ ಅಸಂಖ್ಯ ಮಡದಿಯರನ್ನೂ ಕರೆದೊಯ್ಯುತ್ತಾನೆ.

ಭರತ ಸಾಮಾನ್ಯನಲ್ಲ, ಷಟ್ಖಂಡ ಚಕ್ರವರ್ತಿ, ದಿಗ್ವಿಜಯ ಯಾತ್ರೆಯ ಹಾದಿಯಲ್ಲಿ ಯಾವುದಕ್ಕೂ ಕೊರತೆಯೊದಗಬಾರದೆಂಬ ಜಾಗೃತ ಪ್ರಜ್ಞೆಯಿಂದ, ನಾಗರಿಕರು, ನಿಸರ್ಗ ಸತ್ವಗಳಾದ, ವನದೇವತೆಯ ಮಕ್ಕಳಾದ ಗಿಳಿ, ಕೋಗಿಲೆ, ದುಂಬಿ, ಮರ, ಗಿಡ, ಸರೋವರ ಎಲ್ಲವೂ ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳಂತೆ ಮುದಗೊಳಿಸಲು ಪ್ರಯತ್ನಿಸುತ್ತವೆ.

ವಿಶ್ವದ ಸಮಸ್ತ ಚೇತನಗಳೂ ಭಾವಿಸುವುದಷ್ಟೇ ಅಲ್ಲದೆ ಸ್ವತಃ ಭರತನೇ, ಜನಬಲ, ಸೈನ್ಯಬಲ, ಅಧಿಕಾರಬಲ, ವಂಶಬಲ (ಕೀರ್ತಿ) ತನ್ನದಾಗಿರುವಾಗ, ತನ್ನನ್ನು ಮೀರಿ ಬದುಕಲು, ತನಗೆ ಪ್ರತಿಯಾಗಿ ಎದೆಯೊಡ್ಡಿ ನಿಲ್ಲಲು, ರಾಜ್ಯ ಭೋಗಗಳ ಒಡೆಯರಾಗಲು ಸಾಧ್ಯವಿಲ್ಲ. ಇಂದಿನ ನಮ್ಮ 'ನವವಸಾಹತುಶಾಹಿ' ಪ್ರಭು ಅಮೆರಿಕಾದಂತೆ, ತನ್ನ ಅಧೀನತೆಯನ್ನು ಒಪ್ಪಿಕೊಳ್ಳಲೇಬೇಕೆಂಬ ದುರಾಗ್ರಹ.

ಆತ್ಮಾಭಿಮಾನಿಗಳಾದ ಯಾರೇ ಪ್ರತಿಭಟಿಸಲು ನಿಂತರೆ ಅವರನ್ನು ಹೇಳ ಹೆಸರಿಲ್ಲದಂತೆ ಹೊಸಕಿ ಹಾಕುವ ಉದ್ಧಟ ಪರಾಕ್ರಮ ಅವನದು. ಮಾಗಧಾಮರನ ಪ್ರಸಂಗವೇ ಇದಕ್ಕೆ ಸಾಕ್ಷಿ. ಯಾರ ಪ್ರತಿಭಟನೆಯೂ ಇಲ್ಲದೆ, ಹಲವು ರಾಜರ ಶರಣಾಗತಿ, ಅಧೀನತೆಗಳನ್ನು ಸಾಧಿಸುತ್ತಾ ಸಾಗಿದ ಭರತನ ದಿಗ್ವಿಜಯದ ನಡೆಗೆ ತಡಯುಂಟಾದಾಗ, ಕೋಪಾವಿಷ್ಟನಾಗಿ,

**ಪುರಪರಮೇಶ್ವರ ಪುತ್ರಂ**
**ಭರತೇಶ್ವರ ಚಕ್ರವರ್ತಿ ಬಂದಿರ್ದನಂ ತ**
**ದ್ಧರಣಿನಿವಾಸಿಗಳುಂ ವ್ಯಂ**
**ತರಾಮರರ್ ಬಂದು ಕಾಣ್ಬುದವನತ ಮಕುಟರ್"**

– ಎಂಬ ಸಂದೇಶ ಹೊತ್ತ ಬಾಣವನ್ನು ಕಳಿಸಿಕೊಡುತ್ತಾನೆ.

ಹೆದರಿ ಅವನತರಾಗುವವರು ಕೆಲವರಿದ್ದರೆ. ಆತ್ಮಗೌರವ, ಸ್ವಾಭಿಮಾನ, ಭುಜಬಲ ಹೊಂದಿರುವ ಮಾಗಧನಂತಹವನಿಗೆ ಇಂತಹ ಸಂದೇಶ ಸ್ವಾಭಿಮಾನವನ್ನು ಕೆಣಕಿದಂತಾಗುತ್ತದೆ. ಮಾಗಧನಷ್ಟೇ ಸ್ವಾಭಿಮಾನಿಗಳಾದ ಅವನ ಪರಿವಾರದ ಅಮರರು,

ಭರತನಿಗೆ, ಅವನೆಂತಹವನೇ ಆಗಿರಲಿ ಬುದ್ಧಿ ಕಲಿಸದೆ ಬಿಡೆವೆಂದು ಮುಂದಾದರೂ, ತಾನೇ ಅವನಿಗೆ ಗುಣಪಾಠ ಹೇಳುವೆನೆಂದು ಸಮಾಧಾನ ಪಡಿಸುತ್ತಾನೆ.

"ಶರಚಾಪ ಚಕ್ರ ಭೀಕರ
ಕರವಾಳಾಯುಧವಿರಾಜಿ ಮತ್ಕರಯುಗಮಿಂ
ದೊರೆಗಿಡೆ ಪೆಱಂಗೆ ಮುಗಿವುದೆ
ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ ?

ಕುಲದ ಚಲದಾಯದಜೆವಿನ
ಕಲಿತನದುನ್ನತಿಯನಲಸದೀ ಸುರಸಭೆಯೊಳ್
ಪಲವಾಡುವೆನ್ನ ನಾಲಗೆ
ಬಲಸ್ಥನೊರ್ವಂಗೆ ಜೀಯ, ದೇವೆಂದಪುದೇ ?

ಶರಮನಿದಂ ಕಡಿಕಡಿದುಡಿ
ದೆರಡೆರಡಪ್ಪಂತು ತಱಿದು ರಿಪುಬಲಗಹನಾಂ
ತರಮಂ ಸುಡಲೊಗೆವುದು ದು
ರ್ಧರ ಕೋಪಾಗ್ನಿಯನೆ ಮುನ್ನಮಾಂ ಪೊತ್ತಿಸೆನೇ ?

–ಎಂದು ನುಡಿವ, ಸ್ವಾಭಿಮಾನ, ಸ್ವಶಕ್ತಿ ಸಾಮರ್ಥ್ಯಗಳಲ್ಲಿ ಅಪಾರ ವಿಸ್ವಾಸವಿರಿಸಿಕೊಂಡಿರುವ ಮಾಗಧನ ಸ್ಥಿತಿಯಲ್ಲಿಯೇ, ವಿಶ್ವದ ಹಲವು ರಾಷ್ಟ್ರಗಳಿದ್ದರೂ, ಭರತನಂತಹ ಪ್ರಬಲಶಕ್ತಿಯನ್ನು ಎದುರು ಹಾಕಿಕೊಳ್ಳಲು ಮುಂದಾಗದೆ ಉಳಿಯುವುದಕ್ಕೆ ಕಾರಣಗಳಾದರೂ ಏನು ? ಅಸಹಾಯಕರಂತೆ ವರ್ತಿಸುತ್ತಾ ಅಧೀನತೆಯನ್ನು ಒಪ್ಪಿಕೊಂಡು ಬಾಳುವ ವಿವಶತೆಯಾದರೂ ಯಾಕೆ ? ಎಂಬ ಹಲವು ಪ್ರಶ್ನೆಗಳು ಸಹಜವಾಗಿ ಎದುರಾಗುತ್ತವೆ.

ಮಾಗಧಾಮರನಲ್ಲಿ ಛಲವಿದೆ; ಬಲವಿದೆ. ಉತ್ಸಾಹವಿದೆ; ಭರವಸೆಯಿದೆ. ಆದರೆ ಕುಲವೃದ್ಧರು ಭಾವಿಸಿದಂತೆ ವಿವೇಕ, ದೂರದೃಷ್ಟಿಗಳಿಲ್ಲ; ತರ್ಕದ ಚಿಂತನೆಗೆ ತಾಳ್ಮೆಯಿಲ್ಲ.

ಕುಲವೃದ್ಧರ ಪಕ್ವ ರಾಜಕೀಯ ಅನುಭವ, ಚಾಣಾಕ್ಷತೆ, ತಾಳ್ಮೆ, ವಿವೇಕಗಳಿಗೆ, ಮಾಗಧನನ್ನು ಸಂತೈಸುವ ಸಂದರ್ಭದಲ್ಲಿನ ಮಾತುಗಳೇ ಸಾಕ್ಷಿಯಾಗಿವೆ.

"ಚಲದಭಿಮಾನದುನ್ನತಿಯ ಪೆಂಪನೆ ತಾಳ್ದಿದು ವೀ ನಿಕಾಮಕೋ
ಮಲಭವದುಕ್ತಿಗಳ್ ಬೆಸಸುವರೆ ಪೆಱರಾರಿದನಿಂತು ಸಂದ ತೋ
ಳ್ವಲದದಟಂ ಪರಾಭವಮನೇಕೆಯೋ ಸೈರಿಸುವಂ ಬಲಸ್ಥನೊಳ್
ಬಲಮನೆ ಪೂಣ್ಬುದುಂ ಪರಿಭವಕ್ಕೆ ಮೊದಲ್ ಸುರಸೈನ್ಯನಾಯಕಾ ॥

–ನಮ್ಮ ನಮ್ಮಲ್ಲಿ ಶಕ್ತಿ ಸಾಮರ್ಥ್ಯಗಳಿರಬಹುದು; ಬಲ ಪರಾಕ್ರಮಗಳಿದ್ದೂ ಅವಮಾನವನ್ನು ಸಹಿಸಿಕೊಳ್ಳುವುದು ಸಮ್ಮತವೂ ಅಲ್ಲದಿರಬಹುದು. ಆದರೆ ನಮಗಿಂತ ಬಲಾಢ್ಯನು ಎದುರಾದಾಗ, ಅವನಲ್ಲಿ ಬಲಪ್ರದರ್ಶನಕ್ಕೆ ಸೆಟೆದು ನಿಲ್ಲುವುದೆಂದರೆ

ಸೋಲನ್ನು ಬರಮಾಡಿಕೊಂಡಂತೆ. ಅಲ್ಲದೆ,

**ಕಡುಗಲಿತನಮುಂ ಚಾಗದ**
**ಪಡೆಮಾತುಂ ವಿದ್ಯೆಯುರ್ಕುಮೊರ್ಮನೊಳೆಂತುಂ**
**ನಡೆಯವು ಭುವನಾಂತರದೊಳ್**
**`ನಿಡಿಯರ್ಗಂ ನಿಡಿಯರೊಳರಿದೇಂ ವಿಸ್ಮಯಮೇ ?**

–ಎಂಬಂತೆ ಪ್ರಪಂಚದಲ್ಲಿ ಶೌರ್ಯ, ತ್ಯಾಗ, ಹೊಗಳಿಕೆ ವಿದ್ಯಾಗರ್ವ–ಎಂಬೆಲ್ಲವೂ ಶಾಶ್ವತವಾಗಿ ಒಬ್ಬನಲ್ಲೇ ಇರುವುದಿಲ್ಲ. ಲೋಕದಲ್ಲಿ ದೊಡ್ಡವರಿಗಿಂತಲೂ ದೊಡ್ಡವರಾದವರು ಇದ್ದೇ ಇರುವುದು ವಿಸ್ಮಯದ ಸಂಗತಿಯೇನಲ್ಲವಾದರೂ, ಕಾರ್ಯೋನ್ಮುಖವಾಗುವುದಕ್ಕೆ ಮೊದಲು ಆತ್ಮ ಪರಿವೀಕ್ಷಣೆ, ತಾಳ್ಮೆ, ಸಮಯ ಸಂದರ್ಭಗಳ ಔಚಿತ್ಯದ ಬಗ್ಗೆ ಯೋಚಿಸುವುದು ಅನಿವಾರ್ಯ. ಪೂರ್ವಾಪರ ವಿವೇಚನೆಯಿಲ್ಲದೆ ದುಡುಕುವುದು ಅತ್ಯಂತ ಅಪಾಯಕಾರಿಯಾಗಿ ಪರಿಣಮಿಸುತ್ತದೆ. ಆದ್ದರಿಂದ

**"ಮನ್ನಾಲೋಚಿಸವಾವುದು**
**ಮಂ ನೆಗಟಲ್ಲಾಗದೆಂಬುದೇ ದೊರೆತಿದನೆ**
**ಚ್ಚುನತಯಶನಾವನದಂ**
**ಮುನ್ನಂ ತಿಳಿದಟೆದು ನೆಗಟ ನೆಗಟ್ದುದೀಗಳ್"**

–ಎಂದು ಮಾಗಧನಿಗೆ ನೀಡಿದ ಹಿತೋಪದೇಶ ಬಹುಶಃ ನಮ್ಮಿಂದಿನ ಸ್ಥಿತಿಗೂ ಅನ್ವಯಿಸುತ್ತದೆ. ಶತ್ರುವಾಗಿ ಎದುರಾದಾಗಲೂ ಈ ಬಗೆಯ ನಿಲುವಿನ ಅಗತ್ಯವಿರುವಾಗ, ಮಿತ್ರರಾಷ್ಟ್ರವಾಗಿಯೂ, ವಿಶ್ವಕ್ಷೇಮ ವಿಶ್ವದಭಿವೃದ್ಧಿಯ ಗುತ್ತಿಗೆಯನ್ನು ಸ್ವಯಂ ಘೋಷಿಸಿಕೊಂಡ ಅಮೆರಿಕೆಯೊಂದಿಗಿನ ಅಭಿವೃದ್ಧಶೀಲ ಅಥವಾ ತೃತೀಯ ಜಗತ್ತಿನ ರಾಷ್ಟ್ರಗಳ ಸಂಬಂಧಗಳು ಹೇಗಿರಬೇಕೆಂಬುದನ್ನು ಗಂಭೀರವಾಗಿ ಆಲೋಚಿಸ ಬೇಕಾಗುತ್ತದೆ. ಇಂದಿನ ನವವಸಾಹತುಶಾಹಿ ಕಾಲಘಟ್ಟದಲ್ಲಿ ನಾವು ಅಮೆರಿಕಾಕ್ಕೆ ಭೌತಿಕವಾಗಿ, ರಾಜಕೀಯವಾಗಿ ದಾಸ್ಯಕ್ಕೆ ಒಳಗಾಗಿಲ್ಲವೆನ್ನುವುದು ವಾಸ್ತವವೇ ಆದರೂ ಅಮೂರ್ತವಾಗಿ ಹಲವು ರೀತಿಗಳಲ್ಲಿ, ಹಲವು ರೂಪಗಳಲ್ಲಿ ಆ ಸಾಮ್ರಾಜ್ಯಶಾಹಿ ಪ್ರಭುತ್ವದ ನಿಯಂತ್ರಣಕ್ಕೆ ಒಳಗಾಗಿದ್ದೇವೆ. ಅಲ್ಲಿಂದ ಬರುವ ಅಲಿಖಿತ ಆದೇಶಗಳು, ಸಲಹೆ ಸೂಚನೆಗಳು, ರೂಪಿಸಿ ನಿರ್ದೇಶಿಸುವ ಯೋಜನೆಗಳು, ಬೆದರಿಕೆಯಂತೆ ಕಾಣದ ಬೆದರಿಕೆಯ ನಿರ್ಬಂಧಗಳು – ತನ್ನ ಪ್ರಬಲ ಶಕ್ತಿಯನ್ನು ಒಪ್ಪಿಕೊಳ್ಳಲಬೇಕೆಂಬ ಒತ್ತಾಯದ ಧ್ವನಿಯಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ, ಆ ಪ್ರಬಲ ಶಕ್ತಿಗಳನ್ನು ಎದುರು ಹಾಕಿಕೊಂಡರೆ ಪರಿಣಾಮ ನೆಟ್ಟಗಾಗಲಾರದು ಎನ್ನುವ ಆತಂಕದಿಂದ ಇಷ್ಟವಿದ್ದೋ ಇಷ್ಟವಿಲ್ಲದೆಯೋ ತಲೆಬಾಗದೆ ಗತ್ಯಂತರವಿಲ್ಲವೆಂಬ ವಿವೇಕದ ಜಾಗೃತಿಯೊಂದಿಗೆ ಪ್ರಭುಶಕ್ತಿಯನ್ನು ಒಪ್ಪಿಕೊಳ್ಳುವಂತಹ ಪರಿಸ್ಥಿತಿ ಸೃಷ್ಟಿಯಾಗುತ್ತದೆ.

ಪ್ರಬಲ ಶಕ್ತಿಗಳನ್ನು ಎದುರಿಸಿ ಸೋಲನ್ನು ಅನುಭವಿಸುವ ಅವಿವೇಕಕ್ಕಿಂತ, ಮತ್ತು ವೇಗವಾಗಿ ಹರಿವ ಪ್ರವಾಹಕ್ಕೆ ಎದುರೀಜುವುದಕ್ಕಿಂತ, ಆ ಹರಿವಿನ ದಿಕ್ಕಿನಲ್ಲಿಯೇ ಹೊಂದಿಕೊಂಡು ಸಾಗುವಲ್ಲಿ ದೊರೆವ ಪ್ರಯೋಜನವನ್ನು ಕಾಣುವುದರಲ್ಲಿ ವಿವೇಕವಿದೆ ಎನ್ನುವ ಕುಲವೃದ್ಧರ ಮಾತು, ನೀತಿಗಳೇ ಪ್ರಸ್ತುತ ಸಂದರ್ಭಕ್ಕೂ ಅನ್ವಯವಾಗಬಲ್ಲದು.

ಪ್ರಚಂಡ ಪ್ರವಾಹವಾಗಿ ಹರಿದು ಶತ್ರು ರಾಜ್ಯಗಳನ್ನು ಕೊಚ್ಚಿ, ರಾಜರನ್ನು ಮಣಿಸಿ, ಷಟ್ಖಂಡಗಳನ್ನೂ ಗೆದ್ದು ಒಗ್ಗೂಡಿಸಿ, ಏಕಸ್ವಾಮ್ಯವನ್ನು ಸ್ಥಾಪಿಸಿ, ತನ್ನ ದಿಗ್ವಿಜಯಗಳ ಅಟ್ಟಹಾಸಕ್ಕೆ ತಾನೇ ಸಂಭ್ರಮಿಸಿ, ದಿಗ್ವಿಜಯ ಪ್ರಶಸ್ತಿಗಳನ್ನು ಚಿರಸ್ಥಾಯಿಗೊಳಿಸಲು ವೃಷಭಾಚಲಕ್ಕೆ ಬಂದಾಗ ದಿಗ್ಭ್ರಮೆಯಾಗುತ್ತದೆ. ತನ್ನೊಂದು ಪ್ರಶಸ್ತಿಗೂ ಎಡೆಯಿಲ್ಲದಂತೆ, ಹಿಂದಿನೆಷ್ಟೋ ಚಕ್ರವರ್ತಿಗಳ ಕೀರ್ತಿ ಪ್ರಶಸ್ತಿಗಳು ಆಕ್ರಮಿಸಿಕೊಂಡು ಕುಳಿತಿರುವಾಗಲೂ ಅವನ ವಿಜಯ ಗರ್ವ ಮುಕ್ಕಾಗುವುದಿಲ್ಲ. ಯೋಗಮುಖಿ, ಮೋಕ್ಷಮುಖಿ ಮನಸ್ಸುಗಳಾಗಿದ್ದ ಪಕ್ಷದಲ್ಲಿ ಕೀರ್ತಿ, ಪ್ರಶಸ್ತಿ, ಸಂಪತ್ತುಗಳ ನಶ್ವರತೆಯ ಅರಿವಿನಿಂದಾಗಿ ಪರಿನಿರ್ವಾಣದೆಡೆಗೆ ಸಾಗುತ್ತಿದ್ದುವೇನೋ ! ಆದರೆ ದರ್ಪ, ಅಹಂಕಾರ, ಅಧಿಕಾರಶಾಹಿ, ಕೀರ್ತಿಕಾಮಿ, ಭೋಗಲಾಲಸಿಯಾದ ಭರತನು, ಹಟಮಾರಿತನದೊಂದಿಗೆ, ಅಲ್ಲಿದ್ದ ಹಿಂದಿನವರ ಪ್ರಶಸ್ತಿಗಳನ್ನು ಅಳಿಸಿಹಾಕಿ, ತನ್ನದನ್ನು ಬರೆಸುತ್ತಾನೆ.

ಇವನ ಅಧಿಕಾರಶಾಹಿ ಪವೃತ್ತಿಗೆ, ರಾಜ್ಯದಾಹಕ್ಕೆ ಮಿತಿಯೇ ಇಲ. ಷಟ್ಖಂಡಗಳನ್ನು ವಶಪಡಿಸಿಕೊಂಡೂ ತಣಿಯದ ಮನಸು ಸ್ವಂತ ಸೋದರರನ್ನೂ ಮಣಿಸಿ ಪರಾಧೀನ ಸ್ಥಿತಿಗೆ ಇಳಿಸುವತ್ತ ಮನಸ್ಸು ಮಾಡುತ್ತಾನೆ. ಶತ್ರುಶೇಷ, ಅವರು ಯಾರೇ ಇರಲಿ, ಉಳಿಯಬಾರದೆಂಬುದೇ ಅವನ ಕೆಟ್ಟ ಹಠ. ಅಯೋಧ್ಯೆ ಪ್ರವೇಶಿಸುತ್ತಿದ್ದಂತೆ ಚಕ್ರರತ್ನದ ಗತಿ ಸ್ಥಗಿತಗೊಂಡಿತು. ಬಾಹುಬಲಿ ಮೊದಲಾಗಿ ಸೊದರರು ತನಗೆ ತಲೆಮಣಿಯುತ್ತಿಲ್ಲವೆಂಬ ಸಂಕೇತ ದೊರೆಯುತ್ತಿದ್ದಂತೆ ಅವನ ಸ್ವಾಭಿಮಾನ ಕೆರಳುತ್ತದೆ. ಸೋದರರ ಪ್ರತಿಭಟನೆ ಅವನಿಗೆ ದೊಡ್ಡ ಸವಾಲಾಗುತ್ತದೆ. ಹೇಗಾದರೂ ಮಣಿಸಲೇಬೇಕೆಂಬ ಹಠ ಹೆಡೆ ಬಿಚ್ಚುತ್ತದೆ. ದೇಶ ವಿದೇಶಗಳನ್ನು ಗೆದ್ದುಬಿಡುವುದು ಒಂದು ತೂಕವಾದರೆ, ತನ್ನವರನ್ನೇ ಬಗ್ಗು ಬಡಿದು ಅಧೀನಗೊಳಿಸುವುದು ಮತ್ತೊಂದು ತೂಕ. ಆದ್ದರಿಂದ ನೇರದಾಳಿಯಿಲ್ಲದೆ, ರಾಜಕೀಯ ಜಾಣ್ಮೆಯಿಂದ,

> "ಎನಗೊರ್ವಂಗುಪಭೋಗ್ಯಮಲ್ತು ವಸುಧಾ ಸಾಮ್ರಾಜ್ಯಮೋರಂತೆನಿ
> ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೆಂಬೊಂದು ಕೊಂಡಾಟದಿಂ
> ವಿನಯಂ ಸಲ್ವುದು ತಾಮುಮಾಮುಮೊಡನಿರ್ಪಂಬರ್ಪುದೆಂಬೀಶಶಾ
> ಸನಮುಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್"

–ಎಂದು ಸಂದೇಶ ಕಳಿಸುತ್ತಾನೆ.

ತಂದೆಯಿಂದ ವಂಶಾನುಗತವಾಗಿ ಬಂದ ಸಾಮ್ರಾಜ್ಯವನ್ನು ಅಣ್ಣತಮ್ಮಂದಿರೆಲ್ಲರೂ ಕೂಡಿ ಅನುಭವಿಸಬೇಕೆಂಬುದೇನೋ ಸದಾಶಯವುಳ್ಳದ್ದೇ. ಹಿರಿಯಣ್ಣ ತಂದೆಗ ಸಮಾನ. ಅವರಿಬ್ಬರೂ ಒಂದೇ. ಆದ್ದರಿಂದ ಗೌರವ ತೋರಿಸಬೇಕೆನ್ನುವ ಅವನ ನಿಲುವೂ ಸರ್ವಮಾನ್ಯವೇ. ಆದರೆ ಅವನ ಈ ನಿಲುವು, ಅಭಿಪ್ರಾಯ, ನಿರೀಕ್ಷೆಗಳ ಹಿಂದಿನ ಮನಸ್ಸು ಉದ್ದೇಶ ಉದಾತ್ತವಾದದ್ದಲ್ಲ. ತಂದೆಗೆ ಸಹಜವಾದ ಪ್ರೀತಿ ವಾತ್ಸಲ್ಯಗಳ ಗಂಧವಿಲ್ಲ. ಭರತನ ಆ ಮಾತುಗಳಲ್ಲಿರುವುದು ಅಧಿಕಾರಶಾಹಿ ದರ್ಪ. ನಿಷ್ಠುರ ಆದೇಶ. ಚಕ್ರವರ್ತಿ ತಾನೆಂಬ ಗರ್ವ. ರಾಜ್ಯವನ್ನು ಕಬಳಿಸಬೇಕೆಂಬ ದುರುದ್ದೇಶ.

ಭರತನ ತಮ್ಮಂದಿರು, ಅಣ್ಣನ ಅಂತರಂಗದಾಳದ ವಂಚನೆಯ ವಾಸನೆ ಹಿಡಿಯಲು ಸಮರ್ಥರಾದರೂ, ಅಣ್ಣನನ್ನು ಎದುರಿಸಿ ನಿಲ್ಲುವಷ್ಟು, ಗೆಲ್ಲುವಷ್ಟು ಸಾಮರ್ಥ್ಯ ಉಳ್ಳವರಾದರೂ, ಕಲಹ, ದ್ವೇಷ, ಸಮರ, ಸೋದರ ಹತ್ಯೆ ಇತ್ಯಾದಿ ಪರಿಣಾಮಗಳಿಗೆ ಒಪ್ಪದೆ, ಸ್ವಾಭಿಮಾನಧನರೂ ಪರಾಕ್ರಮಿಗಳೂ ಆದ ನೂರುಮಂದಿಯೂ, ಸ್ವಾಭಿಮಾನ, ಅಣ್ಣನ ಬಗೆಗಿನ ಗೌರವ–ಯಾವುದಕ್ಕೂ ಧಕ್ಕೆಯಾಗದಂತೆ ಸರಳ, ಸುಲಭ ಮಾರ್ಗವನ್ನು ಹುಡುಕಿಕೊಳ್ಳುತ್ತಾರೆ.

**"ಪಿರಿಯಣ್ಣಂ ಗುರು. ತಂದೆಯೆಂದೆಱಗುವಂಮುನ್ನೆಲ್ಲಮಿಂತೀಗಳಾ**
**ೞರಸೆಂಬೊಂದು ವಿಭೇದಮಾದೊಡೆಱಕಂಚಃಕಷ್ಟಮಲ್ತೆ ವಸುಂ**
**ಧರೆಗಯ್ಯಂದಯೆಗೆಯ್ಯೆ ಮುಂ ಪಡೆದುದರ್ಕಿಂತೀತನೊಳ್ ತೊಟ್ಟಕಂ**
**ಕರಭಾವಂ ನಮಗಕ್ಕಿಗೊಟ್ಟುಮಡುಗೂಟುಣ್ಬಂದಮಂ ಪೋಲದೇ ?"**

–ಎಂದು ತರ್ಕೈಸಿ, ತಮ್ಮ ರಾಜ್ಯವನ್ನು ಅವನಿಗೊಪ್ಪಿಸಿ, ಅವನ ಹಂಗಿನಲ್ಲಿ ಬದುಕುವುದೆಂದರೆ ನಾವೇ ಅಕ್ಕಿ ಕೊಟ್ಟು ಅನ್ನದ ಭಿಕ್ಷೆ ಅನುಭವಿಸುವ ಕರ್ಮ ತಮಗೇಕೆಂದು. ತಮ್ಮದುರಿನ ಸಂದಿಗ್ಧದಿಂದ ಪಾರಾಗಲು, ತಪೋಮುಖಿಗಳಾಗುವುದರ ಮೂಲಕ ಸೌಮ್ಯ ಪ್ರತಿಭಟನೆ ತೋರುತ್ತಾರೆ. ಬಾಹುಬಲಿಯ ವಿಷಯವೆ ಬೇರೆ; ಪಲಾಯನವೆನ್ನುವುದು ಅವನ ದೃಷ್ಟಿಯಲ್ಲಿ ಸೋಲಿನ ಸಂಕೇತ. ಅಣ್ಣ–ತಂದೆ ಎಂಬ ಸಮೀಕರಣದಲ್ಲಿ ಪ್ರೀತಿಗಿಂತ ಅಹಂಕಾರವಿದೆ; ಅಧಿಕಾರಮದವಿದೆ. ಹಿರಿಯಣ್ಣನಿಗೆ ಎರಗುವುದು ಅವಮಾನವಲ್ಲವಾದರೂ. ಬಲಾತ್ಕಾರ. ಬೆದರಿಕೆಗಳಿಂದ ಎರಗಿಸಿಕೊಳ್ಳುವುದು ದಬ್ಬಾಳಿಕೆಯಲ್ಲದೆ ಬೇರೆಯಲ್ಲ. ಎರಗುವುದೆಂದರೆ ಪರಾಜಯದ ಉದ್ಘೋಷ. ಆದ್ದರಿಂದ ಸಮರಕ್ಕೇ ನಿಂತು ಸೋಲಿಸಿ. ಅವನನ್ನು ಗಳಿತ ಗರ್ವನಾಗಿಸುವುದೇ ಅಲ್ಲದೆ ರಾಜ್ಯಭೋಗಗಳ ಅರ್ಥಹೀನತೆ. ನಶ್ವರತೆಗಳನ್ನು ಮನದಟ್ಟು ಮಾಡಿಕೊಡಲು ನಿರ್ಧರಿಸಿ. ಸೆಣಸಾಟಕ್ಕೆ ನಿಲ್ಲುತ್ತಾನೆ; ಗೆಲ್ಲುತ್ತಾನೆ; ಆದರೆ ಗೆದ್ದ ಸಮಸ್ತವನ್ನೂ ತೃಣಪ್ರಾಯವಾಗಿ ಪರಿಗಣಿಸಿ ಮೋಕ್ಷಕಾಮಿಯಾಗಿ ತಪಸ್ಸಿನೆಡೆಗೆ ಸಾಗುತ್ತಾನೆ.

ಭರತ, ಬಾಹುಬಲಿಗಳು ಅಸವಾನಶೂರರು. ಆದರೆ ಭರತ ಅಧಿಕಾರಶಾಹಿಯಾಗಿಯೂ ಭೋಗ ಸಂಸ್ಕೃತಿಯ ಹರಿಕಾರನಾಗಿಯೂ ಕಾಣುತ್ತಾನೆ.

ಷಟ್ಖಂಡಗಳನ್ನು ಗೆದ್ದು, ಅಧೀನ ರಾಜ್ಯಗಳ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸಿ, ಶಾಸನವೆಂಬ ದಂಡಭೀತಿಯಿಂದ ಮತ್ತು ನಿಷ್ಠುರ ಆದೇಶಗಳ ಮೂಲಕ ಮಾನವ ಸಂಪತ್ತು, ನಿಸರ್ಗ ಸಂಪತ್ತು, ಸಮಸ್ತ ಜೀವಸಂಕುಲ, ಎಲ್ಲವನ್ನೂ ತನ್ನಾಧಿಪತ್ಯಕ್ಕೆ ಒಳಗಾಗಿಸಿ, ಇಂದು ನಾವು ಹೇಳುತ್ತಿರುವ ಯಾಜಮಾನ್ಯ ಸಂಸ್ಕೃತಿಯನ್ನು ಹೇರುತ್ತಾನೆ.

ಆದರೆ ಅಂತಿಮವಾಗಿ ಸಾವಿರಾರು ವರ್ಷಗಳ ಆಧಿಪತ್ಯವನ್ನು ನಿರ್ವಹಿಸಿ, ಧಾರ್ಮಿಕನಾಗುತ್ತಾನೆ. ಇದು ಧಾರ್ಮಿಕ ಕಾವ್ಯ. ಪ್ರತಿಯೊಬ್ಬ ಮನುಷ್ಯನ ಅಂತಿಮ ಗುರಿ ತ್ಯಾಗ, ತಪಸ್ಸು, ಮೋಕ್ಷ, ಪಾಪ–ಪುಣ್ಯ ಇತ್ಯಾದಿಗಳ ಅನುಸಂಧಾನವೇ ಮುಖ್ಯವೆಂದು ಸಾರುವುದಾಗಿದೆ.

ಈ ಕಾವ್ಯದಲ್ಲಿ ಆದಿ ತೀರ್ಥಂಕರ ವೃಷಭದೇವನ ಕತೆಯೇ ಮುಖ್ಯವಾದರೂ, ಭರತನ ದಿಗ್ವಿಜಯಗಳು, ಷಟ್ಖಂಡ ಸಾಮ್ರಾಜ್ಯಾಧಿಪತಿಯಾಗುವ ಹಂಬಲಗಳು, ಅವನ ಅಧಿಕಾರದಾಹ, ಆಕ್ರಮಣಶೀಲ ಪ್ರವೃತ್ತಿ, ವಿಧ್ವಂಸಕ ಮನೋಧರ್ಮ, ದರ್ಪ, ಅಹಂಕಾರ, ಭೋಗಲಾಲಸೆ ಇತ್ಯಾದಿ ಮುಖಗಳನ್ನೂ ಪರಿಚಯಿಸಲು ಸಾಕಷ್ಟು ಪ್ರಾಧಾನ್ಯತೆಯನ್ನು ನೀಡಿದ್ದಾನೆ. ಭರತನ ಮೂಲಕವಾಗಿ ಭೋಗಸಂಸ್ಕೃತಿಯ ಆಳದಲ್ಲಿನ ಮನಃಸ್ಥಿತಿಯನ್ನು ಬಿಂಬಿಸಿದರೆ, ಬಾಹುಬಲಿ, ವೃಷಭನಾಥರ ಮೂಲಕ ಭೋಗದ ನಶ್ವರತೆಯನ್ನು ಸಾರಿ, ಜೈನಧರ್ಮದಲ್ಲಿನ ಅತಿಮುಖ್ಯವಾದ ತ್ಯಾಗ–ತಪಸ್ಸು, ಶಮೆ, ದಮೆ, ಮೋಕ್ಷ ಇತ್ಯಾದಿ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಾನೆ. ಕವಿ ಪಂಪನಿಗೆ ಭೋಗದ ನಿರಾಕರಣೆ, ಪಲಾಯನಗಳು ಒಪ್ಪಿತವೇನಲ್ಲ. ಆದರೆ ಭೋಗದ ಮಹಾನತೆಯನ್ನು ತ್ಯಾಗದಲ್ಲಿದೆ ಎಂದು ಬಲವಾಗಿ ನಂಬಿರುವುದರಿಂದಲೇ ಆದಿದೇವ ವೃಷಭನಾಥನನ್ನು ಮೊದಲ ಹತ್ತು ಭವಾವಳಿಗಳಲ್ಲಿ ಭೋಗದ ಉತ್ತುಂಗದಲ್ಲಿರಿಸಿ ನಂತರ ಜೀವನ ನಶ್ವರತೆಯ ಅರಿವಿನೊಂದಿಗೆ ವೈರಾಗ್ಯ, ತಪಸ್ಸುಗಳ ಮೂಲಕ ಮರುಹುಟ್ಟಿಲ್ಲದ ಕೈವಲ್ಯ ಸ್ಥಿತಿ, ತಲುಪುವಂತೆ ಚಿತ್ರಿಸಿ, ಧಾರ್ಮಿಕ ಮೌಲ್ಯ, ಯೋಗ ಸಂಸ್ಕೃತಿಗೆ ಒತ್ತುಕೊಡುತ್ತಾನೆ.

ಪಂಪನ ಈ ಕಾವ್ಯಕ್ಕೆ ಇರುವ ಧರ್ಮ–ಪ್ರಭುತ್ವ ಎಂಬೆರಡು ಮುಖಗಳಲ್ಲಿಯೂ ಸಮರ ಸಂಘರ್ಷಗಳು ಸಂಭವಿಸುತ್ತವೆಯಾದರೂ, ಪ್ರಭುತ್ವ ಶಕ್ತಿಯನ್ನು ಪ್ರತಿನಿಧಿಸುವ ಭರತನ ದಿಗ್ವಿಜಯಯಾತ್ರೆಯ ಉದ್ದೇಶದಲ್ಲಿ ಬಲಾತ್ಕಾರದ ಸಮರಗಳು ಸಂಭವಿಸುತ್ತವೆ. ಭರತನ ಸಾಮ್ರಾಜ್ಯಶಾಹಿಮನೋಧರ್ಮ ಪುರಾಣ, ಇತಿಹಾಸಗಳ ಕಾಲದಿಂದಲೂ ಅನೇಕ ರಾಜವಂಶಗಳ, ರಾಜರ ಮೂಲಕ ನಿರಂತರವಾಗಿ ಸಾಗಿ ಬಂದಿದೆ. ಇಂತಹ ಮನೋಧರ್ಮಕ್ಕೆ ಭೂತ, ವರ್ತಮಾನ, ಭವಿಷ್ಯವೆಂಬ ಕಾಲದ ಗಡಿಗಳಿಲ್ಲ; ಮತ್ತು ಇದಕ್ಕೆ ಸಾವೆಂಬುದೂ ಇಲ್ಲ. ಇಂದು ನಾವು ಇದನ್ನೇ ರಾಜಶಾಹಿ, ಸಾಮ್ರಾಜ್ಯಶಾಹಿ,

ವಸಾಹತುಶಾಹಿ, ನವವಸಾಹತುಶಾಹಿ ಎಂದೆಲ್ಲಾ ಹೊಸ ಪರಿಭಾಷೆಯೊಂದಿಗೆ ಗುರುತಿಸುತ್ತೇವೆ.

ವಿಶ್ವವೇ ಒಂದಾಗಬೇಕು. ಒಂದು ಗ್ರಾಮವಾಗಬೇಕು. ವಿಶ್ವದ ವಿವಿಧ ಅರ್ಥವ್ಯವಸ್ಥೆಗಳು ಒಗ್ಗೂಡಬೇಕು. ವಿಶ್ವಮಾನವರ ಕಲ್ಯಾಣವಾಗಬೇಕು - ಎನ್ನುವ ಉದಾತ್ತ ಆಶಯಗಳ ಹಿಂದೆ ರಾಜಕೀಯ, ಆರ್ಥಿಕ ಸಾಂಸ್ಕೃತಿಕ ಯಜಮಾನಿಕೆ, ಲಾಭಗಳಿಕೆಯ ಸ್ವಾರ್ಥ ಹುನ್ನಾರಗಳು ಅನಿವಾರ್ಯವೆಂಬಂತೆ ಅಂತರ್ಗತವಾಗಿರುತ್ತವೆ.

'ಮನುಜ ಕುಲಂ ಒಂದೆ ವಲಂ' ಎಂಬ ಮಾತಿನಲ್ಲಿ ಹುದುಗಿರುವ ಪಂಪನ ಆಶಯಕ್ಕೆ ಸಮಾಂತರದಲ್ಲಿ ಇರುವ 'ಜಾಗತೀಕರಣ'ದ ಆಶಯಗಳು, ನಿಜದ ಅರ್ಥದಲ್ಲಿ ಸಾಕಾರಗೊಳ್ಳಬೇಕಿದೆ; ಅದಕ್ಕಾಗಿ ಕಾಯಬೇಕಿದೆ.

■

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೧೪. ಸಭೆ ನಡೆಸಲು ಒಂದು ದಿಕ್ಸೂಚಿ

-ಡಾ|| ಎಂ. ಚಿದಾನಂದಮೂರ್ತಿ*

ಎಲ್ಲರಿಗೂ ಗೊತ್ತಿರುವ, ಆದರೆ ಬಹುಜನರ ಗಮನಕ್ಕೆ ಬಾರದಿರುವ ಒಂದು ಪ್ರಮುಖ ಸಂಗತಿ ಇದು : ಲಕ್ಷಗಟ್ಟಲೆ ರೂಪಾಯಿ ಬೆಲೆ ಬಾಳುವ ಗಡಿಯಾರ ಅಂಗಡಿಯಲ್ಲಿ ದೊರಕುತ್ತದೆ; ಆದರೆ ಯಾವುದೇ ಅಂಗಡಿಯಲ್ಲಿ ಕೋಟಿ ರೂಪಾಯಿ ಕೊಟ್ಟರೂಒಂದು ಗಂಟೆ ಇರಲಿ, ಒಂದು ನಿಮಿಷ ಅಥವಾ ಸೆಕೆಂಡ್ ಕೂಡ ಸಿಗುವುದಿಲ್ಲ. ಕಾಲ ಅಂಗಡಿಯಲ್ಲಿ ದೊರಕುವುದಿಲ್ಲ; ಅಷ್ಟೇ ಅಲ್ಲ, ಒಂದು ನಿಮಿಷ ಕಳೆದುಹೋದರೆ ಅದನ್ನು ಹುಡುಕಿ ತರಲು ಸಾಧ್ಯವೇ ಇಲ್ಲ ! ಸಮಯಕ್ಕೆ ಸರಿಯಾಗಿ ಬರುವವರು, ಸಿಗುವವರು ಬಹಳ ಕಡಮೆ. ತಡವಾಗಿ ಬಂದರೆ ಏನೋ ಕಾರಣ ಹೇಳುತ್ತಾರೆ : "ಟ್ರಾಫಿಕ್ ಜ್ಯಾಂ" ಎಂಬ ಮಾತು ಈಗ ವಾಡಿಕೆಯಾಗಿದೆ. "ಟ್ರ್ಯಾಫಿಕ್ ಜ್ಯಾಂ" ಇದ್ದರೆ ಬೇಗ ಹೊರಡಲು ಏನು ಅಡ್ಡಿ ? ೧೯೮೦ ರಲ್ಲಿ ನಾನು ಅಮೆರಿಕದ ಬರ್ಕ್ಲಿಗೆ ಹೋಗಿ ಅಲ್ಲಿನ ವಿಶ್ವವಿದ್ಯಾಲಯದ ಅತಿಥಿಗೃಹದಿಂದ ಡಾ|| ಎಂ. ಬಿ. ಎಮಿನೋ ಅವರಿಗೆ ದೂರವಾಣಿ ಮೂಲಕ ಅವರನ್ನು ಭೇಟಿಯಾಗಲು ಸಮಯ ಕೇಳಿದೆ. ಅವರು ಮಾರನೆಯ ದಿನ ಬೆಳಿಗ್ಗೆ ೮.೪೫ಕ್ಕೆ ಕಾರಿನಲ್ಲಿ ಅತಿಥಿಗೃಹಕ್ಕೆ ತಾವೆ ಬಂದು ಜೊತೆಯಲ್ಲಿ ಉಪಾಹಾರ ಮಾಡಲು ಕರೆದೊಯ್ಯುವುದಾಗಿ ಹೇಳಿದರು. ನಾನು ೮-೩೦ರ ಹೊತ್ತಿಗೆ ಸಿದ್ಧವಾಗುತ್ತಿದ್ದಂತೆ, ಅವರು ದೂರವಾಣಿಮಾಡಿ, ೮.೪೫ರ ಬದಲು ೮.೫೦ರ ಹೊತ್ತಿಗೆ ಬರುವುದಾಗಿ ತಿಳಿಸಿದಾಗ ನಾನು ಮನಸ್ಸಿನಲ್ಲೇ ನಕ್ಕೆ. ೮.೪೫ರ ಹೊತ್ತಿಗೆ ಅತಿಥಿಗೃಹದ ಮುಂಭಾಗದ ರಸ್ತೆಗೆ ಹೋಗಿ ನಿಂತೆ; ೮.೪೯ರ ಹೊತ್ತಿಗೆ ದೂರದ ಮೂಲೆಯಲ್ಲಿ ಕಾರು ಕಾಣಿಸಿ ಸರಿಯಾಗಿ ೮.೫೦ಕ್ಕೆ ನನ್ನ ಮುಂದೆ ನಿಂತಿತು. ಅವರು ವಿದ್ವಾಂಸರಾಗಿ ಮಾತ್ರವಲ್ಲ, ಕೊಯಮತ್ತೂರಿನ ಬೇಸಿಗೆ ಭಾಷಾ ವಿಜ್ಞಾನ ಶಿಬಿರದಲ್ಲಿ ನಮಗೆ ಭಾಷಾ

* 'ಮಿಂಚು', ನಂ. ೬/ಎ, ೪ನೇ ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು-೫೬೦ ೦೪೦.

ವಿಜ್ಞಾನದ ಪಾಠ ಹೇಳಿದ್ದರು. ಬರ್ಕ್ಲಿಯ ಪಕ್ಕದ ಸಮುದ್ರದ ಹಿನ್ನೀರಿನ ಮಧ್ಯೆ ಇರುವ ಫಲಾಹಾರ ಮಂದಿರದಲ್ಲಿ ಆ ದ್ರಾವಿಡ ಭಾಷಾ ವಿಭಾಗದ ವಿದ್ವಾಂಸರ ಜೊತೆ ಕಳೆದ ಒಂದು ಗಂಟೆ ಅವಿಸ್ಮರಣೀಯ. ಅಮೆರಿಕದಲ್ಲಿ ನಡೆದ ಕೆಲವು ಭಾಷಾವಿಜ್ಞಾನ ಗೋಷ್ಠಿಗಳೆಲ್ಲ ಸಮಯಕ್ಕೆ ಸರಿಯಾಗಿ ಆರಂಭವಾಗಿ ಸಕಾಲಕ್ಕೆ ಮುಗಿಯುತ್ತಿದ್ದುವು. ಹಲವು ಅಂತಾರಾಷ್ಟ್ರೀಯ, ರಾಷ್ಟ್ರೀಯ, ಪ್ರಾದೇಶಿಕ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಸಂಪ್ರಬಂಧ ಮಂಡಿಸಿರುವ ನಾನು ಈ ಪ್ರಬಂಧದಲ್ಲಿ ನಮ್ಮಲ್ಲಿನ ಅವ್ಯವಸ್ಥೆ, ಅನಾದರ, ಅಶಿಸ್ತುಗಳನ್ನು, ಸಮಯಪಾಲನೆಗೆ ಅಲಕ್ಷ್ಯಮಾಡುವ ನಮ್ಮ ಸಭೆಗಳ ಬಗ್ಗೆ ನನ್ನ ಅನಿಸಿಕೆಗಳನ್ನು ಅಥವಾ ಗಂಭೀರ ಚಿಂತನೆಗಳನ್ನು ದಾಖಲಿಸುತ್ತಿದ್ದೇನೆ.

ಯಾವುದೇ ಸಭೆ ಅಥವಾ ಸಮಾರಂಭ ಆಹ್ವಾನಪತ್ರಿಕೆಯಲ್ಲಿರುವ ಸಮಯಕ್ಕೆ ಸರಿಯಾಗಿ ಆರಂಭವಾಗಬೇಕು. ಸಭಿಕರಿಗೆ ಉಪಾಹಾರ ವ್ಯವಸ್ಥೆ ಇದ್ದರೆ ಅದಕ್ಕೆ ಅರ್ಧ ಗಂಟೆ ಮುನ್ನ ಅದು ಆರಂಭವಾಗಬೇಕು. ನಮ್ಮ ಮನೆಗೆ ಒಬ್ಬ ತಡವಾಗಿ ಬಂದರೆ ಆ ಕಾಲದ ನಷ್ಟ ನನಗೆ ಮಾತ್ರ. ಆದರೆ ಸಭೆ ತಡವಾದರೆ ಆಗ ನೂರಾರು ಅಥವಾ ಸಾವಿರಾರು ಜನರು ಕಾಲದ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಸಭಿಕರು ಸಾಕಷ್ಟು ಸಂಖ್ಯೆಯಲ್ಲಿ ಬಂದಿರಲಿ , ಬರದೇ ಇರಲಿ ಆ ಬಗ್ಗೆ ಯೋಚಿಸಬೇಕಾಗಿಲ್ಲ. ಅಧ್ಯಕ್ಷ ಅಥವಾ ಉದ್ಘಾಟಕರು ಬಂದಿದ್ದರೆ ಸಾಕು–ಅವರಿಂದ ಸಭೆ ಆರಂಭವಾಗಬಹುದು. 'ದೊಡ್ಡ'ವರಿಗಾಗಿ ಸಭೆ ಕಾಯಬೇಕಾಗಿಲ್ಲ. ಅನಿವಾರ್ಯವಾಗಿದ್ದಲ್ಲಿ ಹತ್ತು, ಹೆಚ್ಚೆಂದರೆ ಹದಿನೈದು ನಿಮಿಷ ರಿಯಾಯ್ತಿ ಕೊಡಬಹುದು. ನಾನೇ ಸ್ಪಷ್ಟವಾಗಿ ನೋಡಿರುವಂತೆ, ಸಿರಿಗೆರೆಯ ಮಠಾಧ್ಯಕ್ಷ ಪೂಜ್ಯ ಶ್ರೀ ಡಾ॥ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಜಿ ಸಕಾಲಕ್ಕೆ ಆಗಮಿಸಿ, ನೇರವಾಗಿ ವೇದಿಕೆ ಹತ್ತಿ ತಮ್ಮ ಆಸೀನದಲ್ಲಿ ಕುಳಿತುಕೊಂಡು ಸಭೆ ಆರಂಭವಾಗಲು ಸೂಚಿಸಿದ್ದರು. ಆ ದಿನ ಬರಬೇಕಾಗಿದ್ದ ಒಬ್ಬ ಮುಖ್ಯಮಂತ್ರಿಗಳು ಸಭಾಂತ್ಯದ ವಂದನಾರ್ಪಣೆಗೆ ಹತ್ತು ನಿಮಿಷ ಮುನ್ನ ಬಂದು ನಾಲ್ಕು ಮಾತು ಆಡಿದರು. ಪೂಜ್ಯರ ಈ ಕಠೋರ ಶಿಸ್ತು ನನಗೆ ಮಾತ್ರವಲ್ಲ, ಬಹುಶಃ ಇಡೀ ಸಭಿಕರಿಗೆ ಪ್ರಿಯವಾಯಿತು. ಈಗಲಂತೂ ಬಹುತೇಕ ಎಲ್ಲ ಸಭೆಗಳು ಕನಿಷ್ಠ ಒಂದು ಗಂಟೆ, ಎರಡು ಗಂಟೆ ತಡವಾಗಿ ಆರಂಭವಾಗಿ ಬಹುಕಾಲ ನಡೆಯುತ್ತವೆ. ಎಂದು ಸಭೆ ಮುಗಿದೀತೋ ಎಂದು ಜನ ತುದಿಗಾಲ ಮೇಲೆ ಕುಳಿತಿರುತ್ತಾರೆ. ಮಂತ್ರಿಗಳಾಗಲಿ, ಸ್ವಾಮಿಗಳಾಗಲಿ, ಸಾಹಿತಿಗಳಾಗಲಿ ಹೆಚ್ಚು ಕಾರ್ಯಕ್ರಮಗಳಿಗೆ ಒಪ್ಪಿಕೊಳ್ಳದೆ ಸಕಾಲಕ್ಕೆ ಬಂದು ಭಾಗವಹಿಸುವುದು ತೀರ ಅಗತ್ಯ. ಅವರು ಬರುವುದು ತಡವಾದರೆ ನಿಯೋಜಕರು ಅವರಿಗಾಗಿ ಕಾಯಬೇಕಾಗಲಿಲ್ಲ. ಅವರು ತಪ್ಪು ತಿಳಿದರೂ ಯಾರೂ ಏನೂ ಲೆಕ್ಕಿಸಬೇಕಾಗಿಲ್ಲ.

ಸಮಾರಂಭಗಳನ್ನು ಸ್ಥೂಲವಾಗಿ ಮೂರು ವರ್ಗಗಳಾಗಿ ವಿಂಗಡಿಸಬಹುದು–

೧. ವಿಚಾರಗೋಷ್ಠಿ ಅಥವಾ ಸಂಕಿರಣಗಳು, ೨. ಸಭೆ ಅಥವಾ ಸಮಾರಂಭಗಳು, ೩. ಸಮಾವೇಶಗಳು. ಸಾಮಾನ್ಯವಾಗಿ ದಿನಕ್ಕೆ ಮೂರು ವಿಚಾರಗೋಷ್ಠಿಗಳು ಒಂದು ವಿಷಯಕ್ಕೆ ಸಂಬಂಧಪಟ್ಟದ್ದಕ್ಕೆ ನಡೆಯುತ್ತವೆ. ಒಂದೊಂದು ಗೋಷ್ಠಿಗೆ ಕಾಲದ ಮಿತಿ ಒಂದುವರೆ ಗಂಟೆ; ಅದರಲ್ಲಿ ಮೂವರು ಪ್ರಬಂಧ ಮಂಡನೆ ಮಾಡುವವರಿಗೆ ತಲಾ ೧೫ ನಿಮಿಷ, ಅಧ್ಯಕ್ಷರ ನುಡಿಗೆ ೧೫ ನಿಮಿಷ; ಸ್ವಾಗತ ಪರಿಚಯ ವಂದನಾರ್ಪಣೆಗೆ ಹತ್ತು ನಿಮಿಷ. ಅಧ್ಯಕ್ಷರು ಮೊದಲೇ ಕಾಲ ನಿಗದಿ ಮಾಡಿ ಹದಿನೈದು ನಿಮಿಷ ಆಗುತ್ತಿದ್ದಂತೆ ಗಂಟೆ ಬಾರಿಸಿ ಅಥವಾ ಸೂಚಿಸಿ ಅಥವಾ ಚೀಟಿ ನೀಡಿ ಐದು ನಿಮಿಷಗಳಲ್ಲಿ ಮುಗಿಸಲು ಹೇಳಬೇಕು. ಇಪ್ಪತ್ತು ನಿಮಿಷಗಳನ್ನು ಚರ್ಚೆಗೆ ಮೀಸಲಿಡಬೇಕು. ಬೆಳಿಗ್ಗೆ ೧೦.೩೦ರ ಹೊತ್ತಿಗೆ ಆರಂಭವಾದ ವಿಚಾರಗೋಷ್ಠಿಗಳು ಸಂಜೆ ೫.೦೦ರ ಹೊತ್ತಿಗೆ ಮುಗಿಯಬೇಕು. ಮಧ್ಯೆ ಕಾಫಿ ಉಪಾಹಾರ ಊಟದ ವಿರಾಮ ಇರುತ್ತದೆ. ೫.೦೦ ಅಥವಾ ೫.೩೦ರ ಬಳಿಕ ನಾಟಕ, ಸಂಗೀತ, ವಾದ್ಯಗೋಷ್ಠಿ, ನರ್ತನ ಇವು ಎಷ್ಟು ಹೊತ್ತು ನಡೆದರೂ ಪರವಾಯಿಲ್ಲ. ಪ್ರಬಂಧಗಳನ್ನು ಬರೆದುಕೊಂಡು ಓದುವವರು ಅವು ದೀರ್ಘವಾಗಿದ್ದರೆ, ಅವುಗಳ ಸಾರಾಂಶವನ್ನು ತಿಳಿಸಬೇಕು; ಅಲ್ಲಲ್ಲಿ ಕೆಲವು ಭಾಗಗಳನ್ನು ಬೇಕಾದರೆ ಓದಬಹುದು. ದಿನದಲ್ಲಿ ನಡೆಯುವ ಗೋಷ್ಠಿಗಳ ಸಂಖ್ಯೆ ಗಂಟೆಗಿಂತ ಹೆಚ್ಚು ಮೀರಬಾರದು. ವಿಚಾರಗೋಷ್ಠಿಗಳಲ್ಲಿ ವಿಚಾರ ಮುಖ್ಯ. ಅದರಲ್ಲೂ ಹೊಸ ಚಿಂತನೆ, ಆಲೋಚನೆ, ಸಂಶೋಧನೆಗಳು ಮುಖ್ಯ. ವಿಚಾರಗೋಷ್ಠಿ ವಿಚಾರವಂತರು; ಅವುಗಳಲ್ಲಿ ಭಾಗವಹಿಸುವ ಶ್ರೋತೃಗಳೂ ಅಷ್ಟೇ–ಗೋಷ್ಠಿಯ ವಸ್ತುವಿನಲ್ಲಿ ಆಸಕ್ತಿ ಹೊಂದಿರುವವರು.

ಎರಡನೆಯ ವಿಭಾಗ ಸಭೆಗಳು– ಇವು ಹೆಚ್ಚು ಔಪಚಾರಿಕ. ವಿದ್ಯಾರ್ಥಿ ಸಂಘದ ಉದ್ಘಾಟನೆ ಅಥವಾ ಮುಕ್ತಾಯ ಸಮಾರಂಭವಿರಬಹುದು. ಬಸವಜಯಂತಿ ಅಥವಾ ಕೃಷ್ಣ ಜಯಂತಿ ಇರಬಹುದು, ರಾಜ್ಯೋತ್ಸವ, ಸ್ವಾತಂತ್ರ್ಯೋತ್ಸವ ಆಚರಣೆ ಇರಬಹುದು– ಇವು ಸಾಮಾನ್ಯವಾಗಿ ನಡೆಯುವುದು ಸಂಜೆ. ಬೆಳಗ್ಗೆಯೋ ಸಂಜೆಯೋ ಅದು ಮುಖ್ಯವಲ್ಲ–ಅವೂ ಅಷ್ಟೇ ಹೆಚ್ಚೆಂದರೆ ಎರಡು ಗಂಟೆ ನಡಯಬಹುದು–ಅದು ಸ್ವಾಗತದಿಂದ ವಂದನಾರ್ಪನೆಯವರೆಗೆ.ಅಲ್ಲಿಯೂ ಅಷ್ಟೇ–ಅಧ್ಯಕ್ಷರಾದವರು ಕಾಲವನ್ನು ನಿಯಂತ್ರಿಸಬೇಕು. ಅತಿ ಹೆಚ್ಚು ಸಂಖ್ಯೆಯ ಅತಿಥಿಗಳನ್ನು ಕರೆಯಬಾರದು. ಅವರೂ ಅಷ್ಟೇ–ಅಧ್ಯಕ್ಷರ ಸೂಚನೆಯಂತೆ ಕಾಲಮಿತಿ ಪರಿಪಾಲಿಸಬೇಕು.

ಸಮಾವೇಶಗಳಿಗೆ ಬೃಹತ್ ಪ್ರಮಾಣದಲ್ಲಿ ಜನರು ಜಮಾಯಿಸುತ್ತಾರೆ, ಇಲ್ಲಿಯೂ ಕಾಲಮಿತಿ ಒಟ್ಟು ಮೂರು ಗಂಟೆ ಮೀರಬಾರದು. ರಾಜಕೀಯ ಸಮಾವೇಶಗಳಾದರಂತೂ ಅವು ಇಡೀ ದಿನ ನಡೆಯುವ ಸಾಧ್ಯತೆ ಹೆಚ್ಚು.

ಯಾವುದೆ ಸಭೆಗೆ ಕಾಲವನ್ನು ಪರಿಪಾಲಿಸುವ ವ್ಯಕ್ತಿಯನ್ನು ಮಾತ್ರ ಅಧ್ಯಕ್ಷನನ್ನಾಗಿ

ಆಹ್ವಾನಿಸಬೇಕು. ಅವರು ಬರುವುದು ತಡವಾದರೆ ಉದ್ಘಾಟಕರೋ ಯಾರಾದರೂ ಅತಿಥಿಗಳೋ ಅಧ್ಯಕ್ಷರಾಗಬಹುದು. ಮುಖ್ಯಮಂತ್ರಿಗಳೋ ಮಂತ್ರಿಗಳೋ ಸ್ವಾಮಿಗಳೋ ಯಾರೇ ಆದರೂ ಅವರಿಗಾಗಿ ಕಾಯಬೇಕಾಗಿಲ್ಲ. ಪ್ರಾರ್ಥನೆ, ನಾಡಗೀತೆ, ದೀಪ ಪ್ರಜ್ವಲನೆ ಇವು ಹತ್ತು ನಿಮಿಷಗಳಲ್ಲಿ ಮುಗಿದರೆ, ಪರಿಚಯಕ್ಕೆ ಐದು ನಿಮಿಷ ಸಾಕು. ಒಬ್ಬೊಬ್ಬರ ಬಗ್ಗೆಯೂ ಎರಡೆರಡು ನಿಮಿಷಗಳಲ್ಲಿ ಪರಿಚಯ ಮಾಡಿದರೆ ಸಾಕು. ಒಂದೊಂದು ಭಾಷಣ ಆದಮೇಲೂ ಅದರ ಸಾರಾಂಶ ಹೇಳುವುದು ಸಂಪೂರ್ಣ ಅನವಶ್ಯಕ. ವೇದಿಕೆಯ ಮೇಲೆ ಮಿತಸಂಖ್ಯೆಯ ಆಹ್ವಾನಿತರು ಮಾತ್ರ ಇರಬೇಕು. ವಂದನಾರ್ಪಣೆ ಮೂರು ಅಥವಾ ಐದು ನಿಮಿಷಕ್ಕಿಂತ ಹೆಚ್ಚು ಮೀರಬಾರದು. ವೇದಿಕೆಯ ಮೇಲೆ ಕುಳಿತಿರುವವರಾಗಲಿ, ಶ್ರೋತೃಗಳಾಗಲಿ ಹರಟೆ ಹೊಡೆಯಬಾರದು. ತಮಾಷೆ ಕೇಳಿ ನಗುವುದು, ಮೆಚ್ಚುಗೆಯಾದಾಗ ಚಪ್ಪಾಳೆ ಹೊಡೆಯುವುದು ಇವುಗಳನ್ನು ನಿಯಂತ್ರಿಸಲು ಸಾಧ್ಯವಿಲ್ಲ; ಅವು ಸಭೆಯ ಅಗತ್ಯಗಳು. ಆದರೆ ಯಾರಾದರೂ ಮಾತನಾಡುವಾಗ ಸಿಳ್ಳು ಹಾಕುವುದು ತಪ್ಪು. ವೇದಿಕೆ ಮೇಲೆ ಇರುವವರು ಅನಾರೋಗ್ಯದವರಾದರೆ, ಬೇರೆ ಕಾರ್ಯಕ್ರಮ ಇದ್ದರೆ ಒಬ್ಬರ ಮಾತು ಮುಗಿದಮೇಲೆ ಹೋಗಬಹುದು. ಆದರೆ ಯಾರೂ ಸಭಾ ಮರ್ಯಾದೆಗೆ ಭಂಗ ಬರುವಂತೆ ನಡೆದುಕೊಳ್ಳಬಾರದು. 'ಸಭೆ' ಎಂದರೆ ಒಂದು ಉದ್ದೇಶಕ್ಕಾಗಿ ಕಲೆತ ಜನಸಮೂಹ. ಆ ಜನಸಮೂಹ ನಡೆದುಕೊಳ್ಳಬೇಕಾದ ರೀತಿ 'ಸಭ್ಯತೆ' ಎಂಬುದನ್ನು ನಾವು ಗಮನಿಸಬೇಕು. ಸುಸಂಸ್ಕೃತ ರೀತಿಯಲ್ಲಿ ನಡೆದುಕೊಳ್ಳಬೇಕಾದುದು ಸಭಾಸದನ ಕರ್ತವ್ಯ

ಈ ಲೇಖನದ ಕೇಂದ್ರ ವಿಷಯ: ಸಮಯ ಪರಿಪಾಲನೆ–ಅದೇ ಅತ್ಯಂತ ಮುಖ್ಯ ವ್ಯವಸ್ಥಾಪಕರು, ಅತಿಥಿಗಳು, ಸಭಾಸದರು–ಇವರೇ ಸಭೆ. ಈಚಿನ ವರ್ಷಗಳಲ್ಲಿ ನನಗಾಗಿರುವ ನೋವಿನ ಅನುಭವವೆಂದರೆ–ಮೂವರಲ್ಲೂ ತಪ್ಪು ಕಾಣಿಸಿದೆ. ಸಭಾಸದರು ಹೇಗೂ ತಡವಾಗಿ ಬರುತ್ತಾರೆ ಎಂದು ವ್ಯವಸ್ಥಾಪಕರು ತಮ್ಮ ವ್ಯವಸ್ಥೆಯನ್ನು ನಿಧಾನವಾಗಿ ಮಾಡುತ್ತಾರೆ. ಎಷ್ಟೋ ಸಭೆಗಳಲ್ಲಿ ನಾನು ಹೋದಾಗ ವೇದಿಕೆ ಮೇಲೆ ಕುರ್ಚಿ ಜೋಡಿಸುವ ಕೆಲಸ ನಡೆದಿರುತ್ತದೆ. ವ್ಯವಸ್ಥಾಪಕರೇ ತಡವಾಗಿ ಬಂದಿರುವ ಎರಡು ಮೂರು ಉದಾಹರಣೆಗಳು ಗೊತ್ತು. ಅತಿಥಿಗಳು ಹೇಗೂ ತಡವಾಗಿ ಬರುತ್ತಾರೆ ಎಂದು ಸಭಾಸದರು, ಹೇಗೂ ತಡವಾಗಿ ಆರಂಭವಾಗುತ್ತದೆ ಎಂದು ಅತಿಥಿಗಳು ಭಾವಿಸುತ್ತಾರೆ. ಮೂವರದೂ ಸ್ಪಷ್ಟವಾಗಿ ತಪ್ಪಿದೆ. ಮೇಲೆ ಹೇಳಿದ ಸೂಚನೆಗಳನ್ನು ಅನುಸರಿಸಿದರೆ ಯಾರಿಗೂ ತೊಂದರೆಯಿಲ್ಲ. ಅತಿಥಿಗಳು ತಾವು ಬರುವುದು ತಡವಾದರೆ ದೂರವಾಣಿ ಮೂಲಕ ಸೂಚನೆ ಕೊಟ್ಟು ಸಭೆ ಆರಂಭಿಸಲು ಒಪ್ಪಿಗೆ ನೀಡಬೇಕು. ತಡ ಮಾಡುವುದು ಅದು ಯಾರೇ ಆಗಿರಲಿ, ಅಕ್ಷಮ್ಯ ಅಪರಾಧ. ಅತಿಥಿಗಳಷ್ಟೇ ಅವರ ಕಾಲದಷ್ಟೇ ಸಭಿಕರ ಕಾಲವೂ ಮುಖ್ಯ. ಹಿಂದೆ ನಾವು ಸಾಹಿತಿಗಳ ಕಲಾವಿದರ ಬಳಗ.

ಕನ್ನಡ ಶಕ್ತಿ ಕೇಂದ್ರದ ಆಶ್ರಯದಲ್ಲಿ ವ್ಯವಸ್ಥೆ ಮಾಡಿದ ಸಭೆಗಳೆಲ್ಲ ಸಕಾಲಕ್ಕೆ ಆರಂಭವಾಗಿ ಸಕಾಲಕ್ಕೆ ಮುಗಿಯುತ್ತಿದ್ದವು. ಕಾರ್ಯಕ್ರಮದಲ್ಲಿ ಯಾರು ಯಾರಿಗೆ ಎಷ್ಟು ಸಮಯ ಎಂಬುದನ್ನು ನಿಗದಿ ಮಾಡಿ ಎಲ್ಲ ಅತಿಥಿಗಳಿಗೆ ಅವರ ಕಾರ್ಯಕ್ರಮದ ಪಟ್ಟಿ ಕೊಡಲಾಗುತ್ತಿತ್ತು. ಕೆಲವು ಉಪನ್ಯಾಸಕರು ಮುಗಿಸುವುದು ತಡಮಾಡಿ ಅವರ ಕೈಗೆ ಚೀಟಿ ಬಂದಾಗ ವೇದಿಕೆ ಮೇಲೆ ಸಿಡಿಮಿಡಿಗೊಂಡದ್ದುಂಟು. (ಆ ರೀತಿಯ ಸಭೆಗಳನ್ನು ಬೆಂಗಳೂರಿನ ಕನ್ನಡ ಗೆಳೆಯರ ಬಳಗ ಮುಂದುವರಿಸಿದೆ. ಮಿಥಿಕ್ ಸೊಸೈಟಿಯಂತಹ ಕೆಲವು ಕಡಮೆ ಸಂಖ್ಯೆಯ ಸಂಸ್ಥೆಗಳೂ ಕಾಲಮಿತಿಯನ್ನು ಅನುಸರಿಸುತ್ತಿವೆ.) ಉಪನ್ಯಾಸಕರು ಮಾತನಾಡುವ ಭರದಲ್ಲಿ ಸಮಯಪ್ರಜ್ಞೆಯನ್ನು ಕಳೆದುಕೊಂಡಿರಬಹುದು. ಆದರೆ ಅಧ್ಯಕ್ಷ ಗಡಿಯಾರದ ಮೇಲೆ ನಿಗಾ ಇಟ್ಟು ಕಾಲದಿಂದ ಕಾಲಕ್ಕೆ ಎಚ್ಚರಿಕೆ ನೀಡಬೇಕು. 'ಅಧ್ಯಕ್ಷ' ಎಂದರೆ ಎಲ್ಲವನ್ನೂ ಗಮನಿಸುವವನು. (ಅಕ್ಷಿ=ಕಣ್ಣು), ಮೇಲ್ವಿಚಾರಕ ಎಂದರ್ಥ ಎಂಬುದು ಗಮನಾರ್ಹ. 'ಸಭೆ'ಯ ನಡವಳಿಕೆಯಲ್ಲಿ ಏನಾದರೂ ತಪ್ಪುಗಳಾದರೆ ಅದಕ್ಕೆ ಅಧ್ಯಕ್ಷನೇ ಸಂಪೂರ್ಣ ಹೊಣೆ. ನಾನು ಎಷ್ಟೋ ಸಭೆಗಳಲ್ಲಿ ಅಧ್ಯಕ್ಷತೆ ವಹಿಸಿದಾಗ, ಎಲ್ಲರಿಗೂ ಕಾಲ ನಿಗದಿ ಮಾಡಿ, ನಾನು ಮಾತನಾಡುವಾಗ ಉತ್ಸಾಹದಲ್ಲಿ ಅಥವಾ ಮರವಿನಿಂದ ಕಾಲಮಿತಿ ಮೀರಿದರೆ ನನಗೂ ಸೂಚನೆ ನೀಡಲು ಅಥವಾ ಚೀಟಿ ಕೊಡಲು ಮೊದಲೇ ತಿಳಿಸಿರುತ್ತೇನೆ; ಕೆಲವು ಸಾರಿ ನನಗೆ ಚೀಟಿ ಪ್ರದಾನವಾಗಿರುವುದು ಉಂಟು. ಆ ಚೀಟಿಗಳನ್ನು ಖುಷಿಯಿಂದ ಸ್ವೀಕರಿಸಿದ್ದೇನೆ. ಉತ್ಸಾಹದ ಭರದಲ್ಲಿ ಉಪನ್ಯಾಸಕ ಕಾಲವನ್ನು ಮರೆತಿದ್ದರೆ ಕ್ಷಮ್ಯ; ಆದರೆ ಆ ಬಗ್ಗೆ ಅಧ್ಯಕ್ಷರು ಸೂಚನೆ ನೀಡದಿದ್ದರೆ ಅಕ್ಷಮ್ಯ.

ಆರಂಭದಲ್ಲಿ ಹೇಳಿದ ಮಾತುಗಳನ್ನು ಮತ್ತೆ ಪುನರುಚ್ಚರಿಸುತ್ತೇನೆ. ಯಾವುದೇ ವಿಚಾರ ಸಂಕಿರಣ ಮತ್ತು ಸಭೆಗಳು ಒಂದೂವರೆ ಎರಡು ಗಂಟೆಯನ್ನು, ಸಮಾವೇಶ ಮೂರು ಗಂಟೆ ಅವಧಿಯನ್ನು ಮೀರಬಾರದು. ನಾನು ಸೂಚಿಸಿದ ಕಾಲಕ್ಕೆ ಹದಿನೈದು ನಿಮಿಷ ಸೇರಿಸಬಹುದು–ಆದರೆ ಅರ್ಧ ಗಂಟೆಗಿಂತ ಹೆಚ್ಚು ವಿಳಂಬವಾಗಬಾರದು. ಮತ್ತೆ ಮತ್ತೆ ಒತ್ತಿ ಒತ್ತಿ ಸಾರಿ ಸಾರಿ ಹೇಳುತ್ತೇನೆ–ಕಾಲ ಎಂಬ 'ವಸ್ತು' ಎಷ್ಟೇ ಕೋಟಿ ಹಣ ಕೊಟ್ಟರೂ ಗಡಿಯಾರದ ಅಂಗಡಿಯಲ್ಲೂ ಸಿಗುವುದಿಲ್ಲ. (ಈ ಮಾತನ್ನು ಹೇಳುವಾಗ ನಾನು Sorry, Sorry ಹೇಳಬೇಕಾಗಿಲ್ಲ) ಈ ಲೇಖನ ಓದಿದವರು ನನ್ನನ್ನು ಸಭೆಗಳಿಗೆ ಆಹ್ವಾನಿಸುವಾಗ ಹಿಂದುಮುಂದು ನೋಡಬಹುದು ಎಂಬ ಆತಂಕ ನನಗಿಲ್ಲ. ಆದರೆ ಈ ನನ್ನ ಲೇಖನ ಎಲ್ಲರ ಕೈಗೆ ಹೋಗಲಿ. ಮನದಾಳಕ್ಕೆ ಇಳಿಯಲಿ ಎಂಬ ತೀವ್ರ ತುಡಿತ ನನ್ನದಾಗಿದೆ. ( ಈ ಲೇಖನದ ಹತ್ತಾರು ನೆರಳಚ್ಚು ಪ್ರತಿಗಳನ್ನು ಲೇಖನ ಓದದೆ ಇರುವವರಿಗೆ ಇದರ ಓದುಗರು ಹಂಚಿದರೆ ನನಗೆ ಹರ್ಷವಾಗುತ್ತದೆ.)

ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ-ಜೂನ್, ೨೦೧೩

# ೧೫. ಹಳಗನ್ನಡ ಮತ್ತು ನಡುಗನ್ನಡ ಗದ್ಯ

-ಪ್ರೊ॥ ಜಿ. ಅಬ್ದುಲ್ ಬಷೀರ್*

ಕನ್ನಡ ಸಾಹಿತ್ಯಕ್ಕೆ ಸುಮಾರು ಒಂದು ಸಾವಿರದ ಐದುನೂರು ವರ್ಷಗಳ ಇತಿಹಾಸವಿದೆ., ವಿಪುಲವಾದ ವೈವಿಧ್ಯಮಯವಾದ ಕನ್ನಡ ಸಾಹಿತ್ಯದಲ್ಲಿ ಗದ್ಯ ಕೃತಿಗಳಿಗಿಂತ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗಿವೆ. 'ಪದ್ಯಂ ವಧ್ಯಂ ಗದ್ಯಂ ಹೃದ್ಯಂ' ಎಂದು ಹತ್ತೊಂಬತ್ತನೆಯ ಶತಮಾನದ ಮುದ್ದಣ ಹೇಳಿರುವುದು ಗಮನಿಸಬೇಕಾದ ವಿಚಾರವಾಗಿದೆ. ಕವಿಗಳು ಹಳಗನ್ನಡ ನಡುಗನ್ನಡ ಕಾಲಗಳಲ್ಲಿ ಚಂಪೂ, ಕಂದಪದ್ಯ, ಷಟ್ಪದಿ, ತ್ರಿಪದಿ, ಸಾಂಗತ್ಯ, ರಗಳೆ ಮುಂತಾದ ಛಂದೋಬಂಧಗಳಲ್ಲಿ ಕೃತಿಗಳನ್ನು ರಚಿಸಿದರೇ ಹೊರತು, ಪೂರ್ಣವಾಗಿ, ಗದ್ಯವನ್ನೇ ಕೃತಿಗಳ ಮಾಧ್ಯಮವನ್ನಾಗಿ ಬಳಸಿಕೊಂಡದ್ದು ತೀರಾ ಕಡಿಮೆ ಎಂಬುದು, ಸಾಹಿತ್ಯ ಪ್ರಿಯರಿಗೆ ವೇದ್ಯವಾಗಿರುವ ಸಂಗತಿಯೇ ಆಗಿದೆ. ಆದರೆ ಗದ್ಯ ರೂಪಗಳು ಮಾತ್ರ, ಅನೇಕ ರೀತಿಗಳಲ್ಲಿ ಬಳಕೆಯಾಗಿವೆ. ಗದ್ಯ ಶಾಸನಗಳಲ್ಲಿ , ಶಾಸ್ತ್ರಗ್ರಂಥಗಳಲ್ಲಿ, ಗದ್ಯ ಕಥೆಗಳಲ್ಲಿ, ಚಂಪೂಕೃತಿಗಳಲ್ಲಿ ಅನೇಕ ರೂಪಗಳಲ್ಲಿ ಬೆಳೆದು ಬಂದಿದೆ. ಕನ್ನಡ ವಚನರೂಪದೊಡನೆ ಸೇರಿಕೊಂಡು ಪಡೆದ ವೈವಿಧ್ಯ ಹಾಗೂ ಪರಿಪಕ್ವತೆ ಶ್ಲಾಘನೀಯವಾದದ್ದು. ಪದ್ಯಗಳಂತೆ ಹುಟ್ಟಿನಿಂದಲೇ ಸಂಸ್ಕೃತಕ್ಕೆ ಹೊಂದಿಕೊಂಡು ಬಂದ ಕಾರಣದಿಂದ ಗದ್ಯ ಅಚ್ಚಕನ್ನಡತನ ಮೆರೆದದ್ದು ಕಡಿಮೆ ಎಂದೇ ಹೇಳಬೇಕು. ಆದರೂ ಹತ್ತನೆಯ ಶತಮಾನದ ಪಂಪ, ಹನ್ನೆರಡನೆಯ ಶತಮಾನದ ಹರಿಹರ ನಯಸೇನರಂಥವರ ಕೃತಿಗಳಲ್ಲಿ ದೇಸೀ ಸೊಬಗಿನ ಗದ್ಯವನ್ನು ನೋಡುತ್ತೇವೆ.

ಹಳಗನ್ನಡ-ನಡುಗನ್ನಡ ಕಾಲಗಳಲ್ಲಿ ಗದ್ಯ ಕೃತಿಗಳು ಹೆಚ್ಚು ರಚನೆಯಾಗದಿರುವುದಕ್ಕೆ ಅನೇಕ ಕಾರಣಗಳಿರಬಹುದು. ಮುಖ್ಯವಾಗಿ, ಆ ಕಾಲದಲ್ಲಿ ಗದ್ಯ ಕೃತಿಗಳಿಗೆ ರಾಜಾಸ್ಥಾನದಲ್ಲಾಗಲೀ, ಪಂಡಿತ ಮಂಡಲಿಯಲ್ಲಾಗಲೀ, ಜನಸಾಮಾನ್ಯರಲ್ಲಾಗಲೀ

* ಸಂಪಾದಕರು, ನಿವೃತ್ತ ಕನ್ನಡ ಪ್ರಾಧ್ಯಾಪಕರು, # ೫, ೮ನೇ ಅಡ್ಡರಸ್ತೆ, ಬೈರಸಂದ್ರ, ಜಯನಗರ ೧ನೇ ವಿಭಾಗ ಪೂರ್ವ, ಬೆಂಗಳೂರು-೫೬೦ ೦೧೧, ಮೊಬೈಲ್ ೯೦೦೮೭೬೩೩೩೬

ಅಷ್ಟಾಗಿ ಘನತೆ-ಗೌರವಗಳು ದೊರಕುತ್ತಿರಲಿಲ್ಲ ಎಂದು ನಾವು ಊಹಿಸಬಹುದಾಗಿದೆ. ಪದ್ಯ ಮಾಧ್ಯಮದಲ್ಲಿ ಕೃತಿ ರಚನೆ ಮಾಡಿದರೆ ನೆನಪಿಟ್ಟುಕೊಳ್ಳುವುದು ಸುಲಭ; ಬರವಣಿಗೆಯ ಸಾಮಗ್ರಿಗಳ ಅನುಕೂಲ ಹಾಗೂ ಮುದ್ರಣ ಸೌಕರ್ಯ ಇಲ್ಲದಿದ್ದ ಆ ಕಾಲದಲ್ಲಿ ಪದ್ಯ ಕೃತಿಗಳೇ ಹೆಚ್ಚು ರಚನೆಯಾಗುತ್ತಿದ್ದುದು ಸಹಜ. ಗದ್ಯದಲ್ಲಿ ಗ್ರಂಥರಚನೆ ಮಾಡಿದರೆ ಮಹಾಕವಿ ಪಟ್ಟ ಸಿಗದಿರಬಹುದು ಎಂಬ ಶಂಕೆಯೂ ಕಾರಣವಿರಬಹುದು. ನಾಟಕ ರಚನೆಗೂ ಈ ಮಾತುಗಳು ಅನ್ವಯಿಸುತ್ತವೆ. ಆದ್ದರಿಂದಲೇ ವ್ಯಾಕರಣ, ಅಲಂಕಾರ, ನಿಘಂಟು, ಛಂದಸ್ಸು ಮುಂತಾದ ಶಾಸ್ತ್ರ ಗ್ರಂಥಗಳು ಛಂದೋಬದ್ಧವಾದ ಪದ್ಯದಲ್ಲಿಯೇ ರಚನೆಯಾಗುತ್ತಿದ್ದವು.

ಕ್ರಿ.ಶ. ೮೫೦ ರ ಶ್ರೀ ವಿಜಯ ತನ್ನ ಅಲಂಕಾರಶಾಸ್ತ್ರ ಗ್ರಂಥವಾದ 'ಕವಿರಾಜಮಾರ್ಗ'ದಲ್ಲಿ ಗದ್ಯದ ಲಕ್ಷಣವನ್ನು ಹೀಗೆ ಹೇಳಿದ್ದಾನೆ : "ಕಾವ್ಯ ಪುರುಷನ ಶರೀರವು 'ಗದ್ಯ', 'ಪದ್ಯ' ಎಂದು ಎರಡು ವಿಧ (೧-೨೪). ಪದಪಾದ ನಿಯಮವಿಲ್ಲದಿದ್ದರೂ, ಪದ್ಯಕಾವ್ಯದಂತೆಯೇ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿದ್ದು, ಕ್ರಿಯಾಕಾರಕದಲ್ಲಿ ಸರಿಯಾಗಿ ಸೇರ್ಪಡೆಯಾಗಿ ಅರ್ಥವ್ಯಕ್ತಿಯನ್ನು ಕೊಡುವುದು ಗದ್ಯ" (೧-೨೫). ಗದ್ಯದ ಗುಣಗಳು ಸ್ಪಷ್ಟತೆ, ಖಚಿತತೆ, ನಿರಾಡಂಬರತೆ, ಸಹಜವಾದ ಓಟ, ಕಿವಿಗೆ ಹಿತವಾದ ಶಬ್ದದ ಹೆಣಿಗೆ ಮತ್ತು ಲಯ, ಲಭಿಸಿರುವ ಹಳಗನ್ನಡ-ನಡುಗನ್ನಡ ಗ್ರಂಥಗಳಲ್ಲಿ 'ಮಾರ್ಗ-ದೇಸಿ'ಗಳ ಸಮನ್ವಯ ಇದೆ. ಹೊಸಗನ್ನಡ ಕಥನ ಶೈಲಿಯನ್ನು, ಅನೇಕ ಗ್ರಂಥಗಳಲ್ಲಿ ಕಾಣಬಹದು. ಒಟ್ಟಾರೆ, ಪದ್ಯ ಕಾವ್ಯವ್ಯಕ್ಕಿರುವ ನಿರ್ಬಂಧಗಳು, ಗದ್ಯಕಾವ್ಯಕ್ಕೆ ಇಲ್ಲ.

ಕವಿರಾಜಮಾರ್ಗಕಾರ "ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ" ಮುಂತಾದವರು ಗದ್ಯಕಾರರು ಎಂದು ಹೇಳಿದ್ದಾನೆ (೧-೨೯). ಇವರೆಲ್ಲರೂ ಪೂರ್ವದ ಹಳಗನ್ನಡ ಕಾಲದಲ್ಲಿ ಇದ್ದರೆಂದು ತೋರುತ್ತದೆ. ಆದರೆ ಇವರ ಗದ್ಯಗ್ರಂಥಗಳಾವುವೂ ನಮಗೆ ಸಿಕ್ಕಿಲ್ಲ.

ಪೂರ್ವದ ಹಳಗನ್ನಡ ಕಾಲದಲ್ಲಿ ಗದ್ಯ ವಿಶೇಷವಾಗಿ ಶಾಸನಗಳಲ್ಲಿ ಬಳಕೆಯಾಗಿದೆ; ಪ್ರಧಾನವಾಗಿ, ವರ್ಣನೆ ಇರುವ ಕಡೆ ಗದ್ಯ ಅನುಕೂಲಕರ ಮಾಧ್ಯಮವಾಗಿರುವುದನ್ನು ಗುರುತಿಸಬಹುದು. ಕ್ರಿ.ಶ. ಒಂಬತ್ತನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಅಂದರೆ, ಹಳಗನ್ನಡ-ನಡುಗನ್ನಡ ಕಾಲಗಳಲ್ಲಿ ಕೆಲವು ಸ್ವತಂತ್ರ ಗದ್ಯ ಕೃತಿಗಳು ಹಾಗೂ ಅನುವಾದ ಕೃತಿಗಳು ರಚನೆಯಾಗಿವೆ. ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳನ್ನು 'ಕನ್ನಡ ಗದ್ಯ ಸಾಹಿತ್ಯದ ಸುವರ್ಣಯುಗ' ಎಂದು ಕರೆಯಬಹದು.

ಹಳಗನ್ನಡ ಗದ್ಯ, ಸಂಸ್ಕೃತ ಭೂಯಿಷ್ಠವೂ, ಪಾಂಡಿತ್ಯಪೂರ್ಣವೂ ಆಗಿರುವುದನ್ನು ನೋಡಬಹುದು. ನಡುಗನ್ನಡ ಗದ್ಯ ದೇಸೀ ನಿಷ್ಠವೂ ಜನಸಮ್ಮುಖವೂ ಆಗಿರುವುದನ್ನು

ಗುರುತಿಸಬಹುದು. ಕೆಲವು ಕಡೆ ಗದ್ಯದಲ್ಲಿ ಪದ್ಯ ರಚನೆಯಂತೆಯೇ ಶಬ್ದಗಳ ಜೋಡಣೆ, ಪ್ರಾಸಾನುಪ್ರಾಸ, ಅಲಂಕಾರಗಳ ಬಳಕೆ ಇರುವುದು ಗಮನಾರ್ಹ ವಿಚಾರವಾಗಿದೆ.

**ಶಾಸನ ಗದ್ಯ :**

ಪೂರ್ಣ ಪ್ರಮಾಣದ ಗದ್ಯ ಗ್ರಂಥಗಳು ರಚನೆಯಾಗುವ ಮುನ್ನ, ಶಾಸನಗಳಲ್ಲಿ ಗದ್ಯ ಬಳಕೆಯಾಗಿದೆ. ಶಾಸನಗಳಲ್ಲಿ ಚಾರಿತ್ರಿಕ, ಸಾಮಾಜಿಕ ಘಟನೆಗಳ ಅಪೂರ್ವ ಚಿತ್ರಣ ಇರುತ್ತದೆ. ಗ್ರಂಥಸ್ಥ ಭಾಷೆಯ ಅನುಸರಣೆ ಇದ್ದರೂ, ಪ್ರಚಲಿತ ದೇಸೀ ಶಬ್ದಗಳ ಬಳಕೆಯೂ ಇದೆ ಪ್ರೌಢಭಾಷೆಗಿಂತ ಬೇರೆಯೇ ಆದ ಒಂದು ಮಾರ್ಗವನ್ನು ಅದು ತುಳಿಯಲು ಯತ್ನಿಸಿದಂತೆ ಇದೆ. ಅಲ್ಲಲ್ಲಿ ಅಶುದ್ಧ-ಗ್ರಾಮ್ಯರೂಪಗಳೂ ಕಂಡುಬರುತ್ತವೆ. ಕೆತ್ತನೆಕಾರಿಂದ ಹಾಗೆ ಆಗಿರಬಹುದು; ಅಥವಾ ಶಾಸನದ ವಿಚಾರ ಜನರಿಗೆ ತಿಳಿಯಲಿ ಎಂಬುದಕ್ಕೆ ಇರಬಹುದು, ಗ್ರಾಂಥಿಕ ಭಾಷೆ ಮಾರ್ಗ ಕಾವ್ಯಗಳಲ್ಲಿ ಕಾಲದಿಂದ ಕಾಲಕ್ಕೆ ಆಡುನುಡಿಯಲ್ಲಿ ಆಗಬಹುದಾದ ಬದಲಾವಣೆಗಳನ್ನು ತನ್ನಲ್ಲಿ ಅಳವಡಿಸಕೊಳ್ಳದೆ ಇದ್ದಾಗ, ಶಾಸನಗಳು ಅದನ್ನು ಕೆಲಮಟ್ಟಿಗೆ ಮೂಡಿಸಿರುತ್ತವೆ. ಹೀಗೆ ಶಾಸನ ಗದ್ಯ ಪ್ರಗತಿಪರವಾದ ಒಂದು ಗದ್ಯರೂಪವಾಗಿದೆ. (ರಂ. ಶ್ರೀ. ಮುಗಳಿ).

ಕನ್ನಡ ಭಾಷೆ ಮತ್ತು ಸಾಹಿತ್ಯದ ಅಸ್ತಿತ್ವದ ಬಗೆಗೆ ನಮಗೆ ಕನ್ನಡದಲ್ಲಿಯೇ ಲಭಿಸುವ ಮೊತ್ತಮೊದಲ ಬರೆಹ ಎಂದರೆ, ಕ್ರಿ.ಶ. ೪೫೦ ರ ಹಲ್ಮಿಡಿ ಶಾಸನ. ಸಂಸ್ಕೃತ ಭೂಯಿಷ್ಠವಾದ ಈ ಶಾಸನದಲ್ಲಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಪ್ರಯೋಗಗಳು ಇವೆ. ಇದರಲ್ಲಿ ಕನ್ನಡಿಗರ ಪರಾಕ್ರಮ ಮತ್ತು ದಾನಗುಣಗಳನ್ನು ಚಿತ್ರಿಸಲಾಗಿದೆ. "ಕೇಕಯ ಪಲ್ಲವರಂ ಕಾದೆಜಿದು, ಪೆತ್ತಜಯನಾ ವಿಜರಸನ್ಗೆ ಬಾಳ್ಗಚ್ಚು ಪಲ್ಮಿಡಿಉಂ ಮೂಟಿವಳ್ಳಿಉಂ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು.

ಕ್ರಿ.ಶ. ೮ನೆಯ ಶತಮಾನದ 'ವೀರಗಲ್ಲು', ೧೧೩೮ರ ಬೇಲೂರಿನ ೨೦೨ನೆಯ ಶಾಸನ' ಮತ್ತು ೧೩೬೮ ರ ಶ್ರವಣಬೆಳಗೊಳದ ೩೪೪ನೆಯ ಶಾಸನಗಳಲ್ಲಿ ಕ್ರಮವಾಗಿ 'ದಾನ', 'ಲೆಂಕರಾಯನ ಪರಾಕ್ರಮ' ಮತ್ತು ಬುಕ್ಕರಾಯನ ಸರ್ವಧರ್ಮ ಸಮನ್ವಯದೃಷ್ಟಿ'ಗಳು ಚಿತ್ರಣಗೊಂಡಿವೆ. ಮೂರನೆಯ ಶಾಸನ ನಡುಗನ್ನಡದಲ್ಲಿದೆ.

**ಶಾಸ್ತ್ರಗದ್ಯ :**

೧೦ನೆಯ ಶತಮಾನದ ಪಂಪನ ಆದಿಪುರಾಣದ ತಾತ್ತ್ವಿಕ ಭಾಗದಲ್ಲಿ ಶಾಸ್ತ್ರಗದ್ಯ ಮೊದಲು ಕಾಣಿಸುತ್ತದೆ. ಕವಿರಾಜಮಾರ್ಗದಲ್ಲಿ ಉಲ್ಲೇಖವಾಗಿರುವ ದುರ್ವಿನೀತ ಮುಂತಾದವರು, ಜೈನಧರ್ಮದ ಪ್ರಚಾರಕ್ಕಾಗಿ ಈ ಬಗೆಯ ಗದ್ಯವನ್ನು ಬಳಸಿಕೊಂಡಿರಬೇಕು. ಅವು ಸಂಸ್ಕೃತ ಭೂಯಿಷ್ಠ ಹಾಗೂ ತರ್ಕನಿಷ್ಠವಾಗಿದ್ದಿರಬಹುದು ಎಂಬುದಕ್ಕೆ ಪಂಪನ ಆದಿಪುರಾಣವೇ ಉದಾಹರಣೆಯಾಗಿದೆ. ಬಹುತೇಕ ಜೈನ ಚಂಪೂಗ್ರಂಥಗಳಲ್ಲಿ ಈ ಶಾಸ್ತ್ರಗದ್ಯ ಬಳಕೆಯಾಗಿದೆ. ಕೇಶಿರಾಜನ ಶಬ್ದಮಣಿ ದರ್ಪಣದ 'ವೃತ್ತಿ' ಭಾಗ ಹಳಗನ್ನಡದ ಗದ್ಯದ ಖಚಿತತೆಗೆ, ಸ್ಪಷ್ಟತೆಗೆ ಒಳ್ಳೆಯ ನಿದರ್ಶನವಾಗಿದೆ.

"ವ್ಯಾಕರಣದಿಂ ಪದಸಿದ್ಧಿಯಕ್ಕುಂ, ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ, ಅರ್ಥ ಜ್ಞಾನದಿಂ ತತ್ತ್ವವಿಚಾರಮಕ್ಕುಂ" ಎಂಬ ಸಾಲನ್ನು ಉದಾಹರಣಾಗಾಗಿ ನೋಡಬಹುದು. ಈತನ ಅಲಭ್ಯ ಕೃತಿ ಪ್ರಬೋಧಚಂದ್ರಂ' ಗದ್ಯದಲ್ಲಿದ್ದು ತಾತ್ತ್ವಿಕ ವಿಚಾರಗಳನ್ನೊಳಗೊಂಡಿದ್ದಿರಬೇಕೆಂದು ಊಹಿಸಬಹದಾಗಿದೆ.

**ಗದ್ಯಕಥೆ :**

ಶಾಸ್ತ್ರ ಗದ್ಯಕ್ಕಿಂತ ಸರಳವೂ ದೇಸೀನಿಷ್ಠವೂ ಆದದ್ದು, 'ಗದ್ಯ ಕಥೆ'. ಕವಿರಾಜಮಾರ್ಗದಲ್ಲಿ ಇದರ ಉಲ್ಲೇಖ ಇದೆ. 'ವಡ್ಡಾರಾಧನೆ' ಗದ್ಯ ಕಥೆಗೆ ಒಂದು ಒಳ್ಳೆಯ ನಿದರ್ಶನವಾಗಿದೆ. ದುರ್ಗಸಿಂಹನ 'ಪಂಚತಂತ್ರ' ನಯಸೇನನ 'ಧರ್ಮಾಮೃತ' ಹರಿಹರನ 'ಬಸವರಾಜದೇವರ ರಗಳೆ' 'ನಂಬಿಯಣ್ಣನ ರಗಳೆ' ಮುಂತಾದ ಕೃತಿಗಳ ಸಹಾಯದಿಂದ ಕಥಾ ಗದ್ಯದ ಪ್ರಾಚೀನ ಸ್ವರೂಪವನ್ನು ಅರಿಯಬಹದು.

**ಚಂಪೂಗದ್ಯ :**

೧೦-೧೨ನೆಯ ಶತಮಾನದ ವಿಕ್ರಮಾರ್ಜುನವಿಜಯ, ಗದಾಯುದ್ಧ, ಶಾಂತಿಪುರಾಣ, ಅನಂತನಾಥ ಪುರಾಣ ಮುಂತಾದ ಚಂಪೂ ಕೃತಿಗಳಲ್ಲಿ ಬಳಕೆಯಾಗಿರುವ ಗದ್ಯವನ್ನು, ಚಂಪೂಗದ್ಯ ಎಂದು ಹೆಸರಿಸಬಹುದು. ಈ ಗದ್ಯದಲ್ಲಿ ಕಥನ, ಸಂಭಾಷಣೆ, ಶಾಸ್ತ್ರ ವಿಚಾರಗಳು ಸೇರಿರುತ್ತವೆ. ೧೨ನೆಯ ಶತಮಾನದ ಹರಿಹರನ 'ಬಸವರಾಜ ದೇವರ ರಗಳೆ' ಮತ್ತು 'ನಂಬಿಯಣ್ಣನ ರಗಳೆ'ಗಳೂ ಒಂದು ಬಗೆಯ ಚಂಪೂ ಗ್ರಂಥಗಳೇ ! ರಗಳೆ ಛಂದಸ್ಸಿನ ಏಕತಾನತೆಯನ್ನು ತಪ್ಪಿಸಲು ಮತ್ತು ವೈವಿಧ್ಯತೆಯನ್ನುಂಟು ಮಾಡಲು ಆತ ಒಂದು ಸ್ಥಲ ಪದ್ಯ, ಒಂದು ಸ್ಥಲ ಗದ್ಯ ತಂದಿದ್ದಾನೆ. ಇದು ಗದ್ಯ ಬಳಕೆಯ ಒಂದು ಹೊಸಮುಖವಾಗಿದೆ. ಈ ಗದ್ಯ ಚಂಪೂ ಗದ್ಯಕ್ಕೆ ಹತ್ತಿರವಾದರೂ, ಅದರ ವಿಷಯ, ರಸ, ಶೈಲಿಗಳಲ್ಲಿ ಹರಿಯರನ ವ್ಯಕ್ತಿ ವೈಶಿಷ್ಟ್ಯ ಕಂಡುಬರುತ್ತದೆ. ದೈವ, ಭಕ್ತಿ, ಭಕ್ತನ ವರ್ಣನೆಗೆ ತಕ್ಕ ಆವೇಶಭರಿತ ಭಾಷೆಯನ್ನು ಕಾವ್ಯದಂತೆ ಬಳಸಿರುವುದು ಒಂದು ವಿಶೇಷವಾಗಿದೆ.

"ಅಲ್ಲಿಂ ತಳರ್ದು ಮೋನದಿಂ ಸಾಧುಬ್ರಾಹ್ಮಣನಂತೆ ಚಪ್ಪರದಿಂಮೋಜಮಟ್ಟು ಸೌಂದರ ಪೆರುಮಾಳೆಯಿರ್ದ ವನಕ್ಕೆ ಬಂದು ಅಲ್ಲಿ ಮುಂದೆ" ಎಂಬ ಸಾಲನ್ನು ಉದಾಹರಣೆಗಾಗಿ ನೋಡಬಹುದು., ಪಂಚತಂತ್ರದ ಚಂಪೂಗದ್ಯ ನಿರಾಭರಣವಾದದ್ದು ಅಲ್ಲಿ ನೇರ ನಿರೂಪಣೆ, ಅಚ್ಚಗನ್ನಡದ ಸೊಗಸಿದೆ. ನಯಸೇನನ ಧರ್ಮಾಮೃತದಲ್ಲಿ ತನ್ನ ತೀವ್ರವಾದ ಲೋಕಾನುಭವ, ಸಮಕಾಲೀನ ಭಾಷಾಪ್ರಜ್ಞೆ ಅದರ ಬಳಕೆಯಲ್ಲಿ ತೋರುವ ಉತ್ಸಾಹ ಮೆಚ್ಚುವಂತಹುದು.

ಈಗ ಪೂರ್ಣಪ್ರಮಾಣದ ಗದ್ಯಗ್ರಂಥಗಳ ವಿಚಾರಕ್ಕೆ ಬರಬಹುದು. ಕ್ರಿ.ಶ. ಸುಮಾರು ೯ನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಭ್ರಾಜಿಷ್ಣುವಿನ 'ವಡ್ಡಾರಾಧನೆ' ನಮಗೆ ದೊರೆತ ಮೊಟ್ಟಮೊದಲ, ಸೊಗಸಾದ ಗದ್ಯ ಗ್ರಂಥ. ಇದರಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ

೧೯ ಕಥೆಗಳಿವೆ. ಎಲ್ಲಾ ಕಥೆಗಳೂ ನೀತಿ ಪರವಾಗಿವೆ, ವೈರಾಗ್ಯ ಬೋಧಕವಾಗಿವೆ. ಜ್ಞಾನ, ದರ್ಶನ, ಚಾರಿತ್ರ್ಯ, ತಪಸ್ಸುಗಳ ಆದರ್ಶ ಆಚರಣೆ, ಹಿರಿಯ ಜೈನಯತಿಗಳ ಧರ್ಮ; ಇದನ್ನು ಬೋಧಿಸುವ ಗ್ರಂಥ 'ಆರಾಧನೆ'. ಇಲ್ಲಿನ ಕಥನ ಕಲೆ ಮತ್ತು ದೇಸೀ ನಿಷ್ಠೆ ಅಪೂರ್ವವಾದವು. ಇಲ್ಲಿ ಕನ್ನಡ ಸಂಸ್ಕೃತಗಳ ಸರಿಬೆರಕೆಯಿದೆ. ಗಾದೆಮಾತುಗಳು, ಒಳ್ನುಡಿಗಳು ಹೇರಳವಾಗಿವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಚಿರಂತನವಾಗಿ ನೆನೆಯಬಹುದಾದ ವೈಶಿಷ್ಟ್ಯಪೂರ್ಣವಾದ ಕೃತಿಯಾಗಿದೆ. ಧರ್ಮಪ್ರಚಾರ ಮಾಡಲು, ಪದ್ಯ ರಚನೆಗಿಂತ ಗದ್ಯ ರಚನೆ ಹೆಚ್ಚು ಅನುಕೂಲಕರ ಎಂದು ಕವಿ ಭಾವಿಸಿದಂತೆ ಇದೆ. "ನಿಸ್ಸಾರಮಪ್ಪ ಭೋಗದೊಳ್ ಸಿಲ್ಕಿ, ಅಮೇಧ್ಯದೊಳ್ ಕ್ರೀಡಿಸುವ ಬಾಳಕಂಬೊಲ್, ಕಾಲಮಂ ಬಜಿದೆ ಕಳೆದೆಂ" ಎಂಬ ಸಾಲನ್ನು ಗದ್ಯದ ಸೊಗಸಿಗಾಗಿ ನೋಡಬಹದು.

'ತ್ರಿಷಷ್ಠಿ ಲಕ್ಷಣ ಮಹಾಪುರಾಣ' ಇಲ್ಲವೆ 'ಚಾವುಂಡರಾಯ ಪುರಾಣ'ದ ಕರ್ತೃ ಚಾವುಂಡರಾಯ. ಈತನ ಕಾಲ ೯೭೫. ಜೈನಧರ್ಮ ನಿರೂಪಣೆ ಇದರ ಮುಖ್ಯ ಗುರಿ. ನಡುನಡುವೆ ತೀರ ಕಡಿಮೆ ಪದ್ಯಗಳನ್ನು ಒಳಗೊಂಡ ಗದ್ಯಭೂಯಿಷ್ಠ ಕೃತಿ ಇದು. ಪದ್ಯರೂಪದಲ್ಲಿದ್ದ ಸಂಸ್ಕೃತ ಕೃತಿ, ಗದ್ಯ ರೂಪ ತಾಳಿದೆ. ಕಥಾ ಗದ್ಯದ ಸಹಜ ನಡೆ, ಬಳಕೆ ಮಾತಿನ ಸೊಗಸು, ಸಾಸ್ತ್ರಗದ್ಯದ ಅಚ್ಚುಕಟ್ಟು, ಜನಸಾಮಾನ್ಯರನ್ನೂ ಆಕರ್ಷಿಸುತ್ತದೆ. ಜೈನ ಧರ್ಮ, ತತ್ತ್ವ, ಸಂಪ್ರದಾಯಗಳ ಬಗ್ಗೆ ಆಸಕ್ತಿ, ಶ್ರದ್ಧೆಗಳನ್ನು ಸಾಮಾನ್ಯ ಜನರಲ್ಲಿ ಹುಟ್ಟಿಸುವ ಅಪೇಕ್ಷೆ, ಗಾಂಭೀರ್ಯ–ಸರಳತೆಗಳ ಮಿಶ್ರಣ, 'ವಡ್ಡಾರಾಧನೆ' ಮತ್ತು 'ಚಾವುಂಡರಾಯ ಪುರಾಣಗಳಲ್ಲಿ ಸಮಾನವಾಗಿ ಬಂದಿವೆ. ಮಾರ್ಗಕಾವ್ಯದ ಪ್ರೌಢಕೃತಿಗಳು ಸೃಷ್ಟಿಯಾಗುತ್ತಿದ್ದ ಕಾಲದಲ್ಲಿ ಈ ಕೃತಿಗಳು ರಚಿತವಾದದ್ದು, ವಿಶೇಷವಾದ ಸಂಗತಿಯಾಗಿದೆ. "ಅನ್ನೆಗಂ ಶೋಕಮಂ ಪತ್ತುವಿಟ್ಟು ಸೈರಿಸುವುದೆಂದು ಸೀತೆಯಲ್ಲಿಗೆ ದೂತರನಟ್ಟುವುದೆಂದು ಲೇಖವಾರ್ತೆಯಂ ಕೇಳ್ದು ರಾಮಸ್ವಾಮಿ ಕೋಪರಸಾಕ್ರಾಂತನಾಗೆ" ಎಂಬ ಸಾಲನ್ನು ಉದಾಹರಣೆಯಾಗಿ ನೋಡಬಹುದು.

೧೩೦೦ ರಲ್ಲಿ ಹಸ್ತಿಮಲ್ಲ ಕವಿ "ಪೂರ್ವಪುರಾಣವನ್ನು ರಚಿಸಿದ್ದಾನೆ. ಚಾವುಂಡರಾಯ ಪುರಾಣದ ಆದಿಪುರಾಣ ಇಲ್ಲಿ 'ಪೂರ್ವಪುರಾಣ'ವಾಗಿ ಪರಿಣಮಿಸಿದೆ. ಅಚ್ಚಗನ್ನಡ ಶಬ್ದ ಬಳಕೆ ಇಲ್ಲಿನ ಸೊಗಸು. ಹಳಗನ್ನಡ ಹೊಸಗನ್ನಡ ಮಿಶ್ರಣ ಭಾಷೆ ಇಲ್ಲಿದೆ.

ನಡುಗನ್ನಡ ಕಾಲದಲ್ಲಿ ಅಂದರೆ ೧೩ ರಿಂದ ೧೮ನೆಯ ಶತಮಾನಗಳಲ್ಲಿ ಮತಧರ್ಮಶಾಸ್ತ್ರಗಳನ್ನು ನಿರೂಪಿಸುವ ಗದ್ಯ ಗ್ರಂಥಗಳು, ತೀರಾ ಕಡಿಮೆ ಲಭಿಸುತ್ತವೆ. ೧೫೦೦ ರ ನಿಜಗುಣ ಶಿವಯೋಗಿಗಳ 'ವಿವೇಕ ಚಿಂತಾಮಣಿ" ಒಂದು ಜ್ಞಾನಕೋಶ. ಸಾಹಿತ್ಯದ ಲಕ್ಷಣವುಳ್ಳ ಕೆಲವು ಕೃತಿಗಳು, ೧೭ನೆಯ ಶತಮಾನದಲ್ಲಿ ರಚಿತವಾದವು. ಚಿಕ್ಕದೇವರಾಜ ಬಿನ್ನಪದಲ್ಲಿ ಶ್ರೀವೈಷ್ಣವ ಮತದ ತತ್ತ್ವಗಳನ್ನು, ಒಂದೊಂದು ಬಿನ್ನಪದಲ್ಲಿ ನಿರೂಪಿಸಿದೆ. ಶಾಸ್ತ್ರವನ್ನು ಸಾಹಿತ್ಯ ರೂಪಕ್ಕೆ ಇಳಿಸಿದ, ಭಕ್ತಿ ಜ್ಞಾನ ಮಿಶ್ರಣವುಳ್ಳ ಗ್ರಂಥ

ಇದು. ಶೈಲಿಯ ಸರಳತೆ, ಇಲ್ಲಿನ ಸೊಬಗು.

ತಿರುಮಲಾರ್ಯನ 'ಚಿಕ್ಕದೇವರಾಯ ವಂಶಾವಳಿ', ಕಾವ್ಯ ಪ್ರೌಢಿಮೆಯ ಸುಂದರ ಗದ್ಯ ಕೃತಿಯಾಗಿದೆ. ಚರಿತ್ರೆ, ಮತೀಯತೆ, ಭಕ್ತಿಗಳ ವಿಶಿಷ್ಟಪಾಕ ಈ ಕೃತಿಯಲ್ಲಿದೆ. ಸಂಸ್ಕೃತ ಸಂಸರ್ಗವನ್ನು ತ್ಯಜಿಸಿದೆ, ಅಚ್ಚಗನ್ನಡದ ಶೈಲಿಯನ್ನು ಈ ಕವಿ ಮೈಗೂಡಿಸಿಕೊಂಡಿದ್ದಾನೆ

೧೮ನೆಯ ಶತಮಾನದ ದೇವಚಂದ್ರನ 'ರಾಜಾವಳೀ ಕಥೆ' ಚಾರಿತ್ರಿಕ ಕಥನ ಸಾಮಗ್ರಿಯನ್ನೊಳಗೊಂಡ, ಮೌಲಿಕ ಗದ್ಯ ಕೃತಿಯಾಗಿದೆ. ಮೈಸೂರು ರಾಜರ ಪರಂಪರೆಯನ್ನು ಸಂಗ್ರಹಿಸಿರುವುದಲ್ಲದೆ, ಜೈನಧರ್ಮಕ್ಕೆ ಸಂಬಂಧಿಸಿದ ಕೆಲವು ವಿವರಗಳೂ, ರಾಜರ ಚರಿತ್ರೆ ಹಾಗೂ ಕೆಲವು ಕವಿಗಳ ವಿಷಯಗಳೂ ಇದರಲ್ಲಿರುವುದು ಸ್ವಾರಸ್ಯವಾದ ಸಂಗತಿಯಾಗಿದೆ.

೧೮೨೩ ರಲ್ಲಿ ರಚಿತವಾದ ಕೆಂಪುನಾರಾಯಣನ 'ಮುದ್ರಾಮಂಜೂಷ' ಹಳಗನ್ನಡ–ನಡುಗನ್ನಡ–ಹೊಸಗನ್ನಡಗಳ ಮಿಶ್ರಣವನ್ನು ಒಳಗೊಂಡಿರುವಂಥ ಗದ್ಯ ಕೃತಿಯಾಗಿದೆ.

೧೮೬೯–೧೯೦೧ ರ ನಡುವಿನ ಅವಧಿಯಲ್ಲಿ ಬದುಕಿದ್ದ ಮುದ್ದಣ 'ಶ್ರೀರಾಮಾಶ್ವಮೇಧ' ಮತ್ತು 'ಅದ್ಭುತ ರಾಮಾಯಣ' ಎಂಬ ಎರಡು ಹಳಗನ್ನಡ ಗದ್ಯ ಗ್ರಂಥಗಳನ್ನು ಬರೆದಿದ್ದಾನೆ. ಇದೊಂದು ವಿಚಿತ್ರ ಎನಿಸಿದರೂ, ವೈಶಿಷ್ಟ್ಯಪೂರ್ಣ ಗದ್ಯದ ಬಳಕೆಯಿಂದಾಗಿ, ಈ ಕೃತಿಗಳು ಜನಮನ್ನಣೆ ಪಡೆದಿವೆ. ಹೇರಳವಾದ ತದ್ಭವ ಶಬ್ದಗಳ ಬಳಕೆ ಇಲ್ಲಿದೆ. ಅದ್ಭುತರಾಮಾಯಣದ ಶಿಲ್ಪ ಆಧುನಿಕ ಸಣ್ಣ ಕತೆಗಳಂತೆ ಇದೆ ಎಂದರೆ ತಪ್ಪಾಗಲಾರದು.

ಎಲ್ಲಾ ಗದ್ಯ ಗ್ರಂಥಗಳೂ ಮೂಲವನ್ನು ಅನುಸರಿಸಿದ್ದರೂ ಅವು ಪಡೆದಿರುವ ಕಲಾತ್ಮಕತೆ ಹಾಗೂ ಸಂಸ್ಕೃತವನ್ನು ಬಿಡದೆ, ಅಚ್ಚಗನ್ನಡದತ್ತ ಒಲಿದಿರುವ ತನ್ನತನವನ್ನು ಒಳಗೊಂಡ ಗದ್ಯ ಶೈಲಿಯನ್ನು ಪಡೆದಿವೆ.

**ಗ್ರಂಥ ಋಣ**

೧. ಕನ್ನಡ ಸಾಹಿತ್ಯ ಚರಿತ್ರೆ–ಡಾ॥ ರಂ. ಶ್ರೀ ಮುಗಳಿ.
೨. ಕನ್ನಡ ಸಾಹಿತ್ಯದ ಪ್ರಾಚೀನ ರೂಪಗಳು–ಡಾ॥ ರಂ. ಶ್ರೀ ಮುಗಳಿ.
೩. ಹಳಗನ್ನಡ ಗದ್ಯ ವಿಕಾಸ–ಪ್ರೊ॥ ಎನ್. ಬಸವಾರಾಧ್ಯ.
೪. ಕನ್ನಡದ ಪ್ರಾಚೀನ ಸಾಹಿತ್ಯ ಲಕ್ಷಣಗಳು–ಮರುನೋಟ–ಪ್ರೊ॥ ಟಿ. ಕೇಶವಭಟ್ಟ.



ಕರ್ನಾಟಕ ಲೋಚನ
ಸಂಪುಟ ೨೭, ಸಂಚಿಕೆ ೧
ಜನವರಿ–ಜೂನ್, ೨೦೧೩

# ೧೬.(ಅ) ಗ್ರಂಥ ವಿಮರ್ಶೆ : ವಿಶ್ವಗುರು ಶ್ರೀಕೃಷ್ಣ

–ಎಂ. ಕೆ. ಗೋಪಿನಾಥ್*

ಭರತ ಖಂಡದ ಇತಿಹಾದುದ್ದಕ್ಕೂ ಸೂರ್ಯ ಪ್ರಭೆಯಂತೆ ರಾರಾಜಿಸುವ ಇಬ್ಬರು ದೈವೀ ಪುರುಷರೆಂದರೆ ಭಗವಾನ್ ಶ್ರೀಕೃಷ ಹಾಗೂ ಕೌಸಲ್ಯಾ ಸುತ ಶ್ರೀರಾಮಚಂದ್ರಮೂರ್ತಿ. ಇಬ್ಬರಲ್ಲಿ ಯಾರು ಹೆಚ್ಚು, ಯಾರು ಕಡಮೆಯೆಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಇಬ್ಬರೂ ಸಮಾನರು. ಆದರೂ ಈ ಇಬ್ಬರು ಹುಟ್ಟಿ ಬೆಳೆದ ಬಗೆ ಬೇರೆ ಬೇರೆ. ಇಬ್ಬರ ಲೀಲಾಪ್ರಸಂಗಗಳು ಕೂಡ ವಿಭಿನ್ನ ರೀತಿಯವು. ಕೃಷ್ಣನದು ಹೆಚ್ಚು ವರ್ಣರಂಜಿತ ಕಥೆ. ಶ್ರೀರಾಮ ಏಕಪತ್ನೀವ್ರತಸ್ಥ; ಕೃಷ್ಣ ಸ್ತ್ರೀಲೋಲ. ಲೋಕ ಕಲ್ಯಾಣಾರ್ಥವಾಗಿ ರಾಜನೀತಿಯಲ್ಲಿ ಕುಟಿಲತೆ ತೋರಬೇಕಾದರೆ ಕೃಷ್ಣ ಮುಂದು.

ಕೃಷ್ಣ ಜಗತ್ತಿಗೆ–ವಿಶೇಷವಾಗಿ ಭರತ ಖಂಡಕ್ಕೆ–ಭಗವದ್ಗೀತೆಯೆಂಬ ಅಪ್ರತಿಮ ಗ್ರಂಥವನ್ನು ಕೊಟ್ಟ. ಎಂದೇ ಅವನು ಗೀತಾಚಾರ್ಯನಷ್ಟೇ ಆಗದೆ ಲೋಕಗುರುವೂ ಆದ. ಕೃಷ್ಣನ ವಿಷಯ ಬರೆದಷ್ಟೂ ಇದೆ; ಬರೆದಷ್ಟೂ ಬೇಕು.

ಶ್ರೀಮತಿ ಲಕ್ಷ್ಮಿ ಪಿ. ಅವರು ಬರೆದಿರುವ 'ವಿಶ್ವಗುರು ಶ್ರೀಕೃಷ್ಣ' ಎಂಬ ಕಿರು ಪುಸ್ತಕ ಕೃಷ್ಣನನ್ನು ಕುರಿತು ಬರೆದಿರುವ ಅಗಾಧ ಸಾಹಿತ್ಯ ರಾಶಿಗೆ ಇತ್ತೀಚಿನ ಸ್ವಾಗತಾರ್ಹ ಸೇರ್ಪಡೆ. ನೂರಾರು ಘಟನಾ ವಿಶೇಷಗಳನ್ನುಳ್ಳ ಶ್ರೀ ಕೃಷ್ಣನ ಕಥೆಯನ್ನು ಸರಳವಾದ ವಾಕ್ಯಗಳಲ್ಲಿ ಹಾಗೂ ಹೃದಯಂಗಮವಾದ ಭಾಷೆಯಲ್ಲಿ ಬರೆದು ಲಕ್ಷ್ಮಿ ಪಿ. ಕೃತಾರ್ಥರಾಗಿದ್ದಾರೆ. ಒಂದು ಪುಸ್ತಕದ ಸಂಗ್ರಹರೂಪ ಎಂದರೆ ಹೀಗಿರಬೇಕು ಎನ್ನುವಂತಿದೆ ಈ ಕೃತಿ. ಇಂಥದೊಂದು ಪುಸ್ತಕವನ್ನು ಬರೆದು ಶ್ರೀಮತಿಯವರು ಕನ್ನಡದ ಓದುಗರ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಕೃತಿಯ ರಕ್ಷಾಕವಚದ ಕಡೆಯ ಪುಟದಲ್ಲಿ ದಿವಂಗತ ಆರ್. ವಿನಯ್ ಅವರನ್ನು ಕುರಿತ ಪುಟ್ಟ ಪರಿಚಯವಿದ್ದು ಅದು ಮನಕಲಕುವಂತಿದೆ. ಬಹು ಬೇಗ ದೇವರಡಿಗೆ ತೆರಳಿದ ಆರ್. ವಿನಯ್ ಅವರ ಸ್ಮರಣಾರ್ಥವಾಗಿ ಈ ಕೃತಿ ಹೊರಬಂದಿರುವುದು ತುಂಬ ಶ್ಲಾಘ್ಯ ಕಾರ್ಯ. ಇಂಥ ಗುರುತರ ಕಾರ್ಯಭಾರವನ್ನು ಹೊತ್ತ ವಿನಯ್ ಫೌಂಡೇಶನ್(ರಿ.)ನವರು ವಂದನಾರ್ಹರು.

* ನಂ. 'ಟಿ' ೨೨೭, ೩೫ನೇ ಕ್ರಾಸ್, ೧೬ನೇ ಮೇನ್, 'ಟಿ' ಬ್ಲಾಕ್, ಜಯನಗರ, ಬೆಂಗಳೂರು–೪೧
ದೂರವಾಣಿ : ೦೮೦–೨೨೪೪೩೫೬೩.

## (ಆ) ಗ್ರಂಥ ವಿಮರ್ಶೆ : ಆದರ್ಶ ಪುರುಷ ಶ್ರೀರಾಮ

ಮರ್ಯಾದಾ ಪುರುಷೋತ್ತಮ, ಪಿತೃವಾಕ್ಯ ಪರಿಪಾಲಕ, ಭ್ರಾತೃವತ್ಸಲ, ಅತುಲ ಪರಾಕ್ರಮ ಹೀಗೆ ನೂರಾರು ಅಭಿಧಾನಗಳಿಂದ ಭರತಖಂಡದ ಜನರ ಮನದಾಳದಲ್ಲಿ ಸ್ಥಿರವಾಗಿ ನೆಲೆನಿಂತಿರುವ ಶ್ರೀರಾಮಚಂದ್ರಮೂರ್ತಿಯ ದಿವ್ಯ ವ್ಯಕ್ತಿತ್ವವನ್ನು ಅಂಗೈ ಅಗಲದ ೫೦ ಪುಟಗಳ ಕಿರುಹೊತ್ತಿಗೆಯಲ್ಲಿ ಪಡಿಮೂಡಿಸುವುದು ಅಪೂರ್ವ ಎದೆಗಾರಿಕೆಯನ್ನು ಬೇಡುವ ಕಾರ್ಯ. ಅಂಥದೊಂದು ಸಾಹಸದ ಕೆಲಸಕ್ಕೆ ಕೈಹಾಕಿ ಯಶಸ್ವಿಯಾಗಿರುವ ಪುಟ್ಟ ಕೃತಿ ಪ್ರೊ॥ ಎಸ್. ಬಿಳಿಗಿರಿ ವಾಸನ್ ಅವರ 'ಆದರ್ಶಪುರುಷ ಶ್ರೀರಾಮ'.

ಶ್ರೀಮದ್ರಾಮಾಯಣವು ಲೋಕ ಪೂಜ್ಯನೂ, ದಶರಥನಂದನನೂ ಆದ ಶ್ರೀರಾಮಚಂದ್ರನನ್ನು ಕುರಿತ ಕಥೆ ಇರುವ ಮಹದ್ಗ್ರಂಥ. ಇಡೀ ಲೋಕವೇ ಭಕ್ತಿಯಿಂದ ಆರಾಧಿಸುವ, ಜನರೊಡನೆಯೇ ಇದ್ದು ದೈವತ್ವಕ್ಕೇರಿಸುವ ಮಹಾಪುರುಷನ ಬಗೆಗೆ ಇಷ್ಟು ಸರಳವಾಗಿ ಹೇಳಿಬಿಟ್ಟರೆ ಸಾಕೆ ? ಖಂಡಿತ ಸಾಲದು. ಆದರೆ ಶ್ರೀರಾಮನ ಕಥೆಯು ಅಮೃತದ ಚಿಲುಮೆ. ಅವನನ್ನು ಕುರಿತು ಅದೆಷ್ಟು ಲಕ್ಷ ಪುಟಗಳಲ್ಲಿ ಈಗಾಗಲೇ ಬರಹದಲ್ಲಿ ಬಂದಿವೆಯೋ ಹೇಳಬಲ್ಲವರಾರು ? ಅಲ್ಲದೆ ಶ್ರೀರಾಮಚಂದ್ರಮೂರ್ತಿಯ ಕೋಟಿ ಗುಣಗಳಲ್ಲಿ ಯಾವುದನ್ನು ಹೇಳುವುದು ಯಾವುದನ್ನು ಬಿಡುವುದು ಎನ್ನುವ ಪ್ರಶ್ನೆ ರಾಮನ ಕಥೆ ಬರೆವವರೆಲ್ಲರಿಗೂ ಎದುರಾಗುತ್ತದೆ.

ಒಂದೇ ಮಾತಿನಲ್ಲಿ ಹೇಳಬೇಕಾದರೆ ಈ ಪುಟ್ಟ ಕೃತಿಯಲ್ಲಿ ಶ್ರೀರಾಮನ ವ್ಯಕ್ತಿತ್ವ ವರ್ಣನೆಯನ್ನು ತಿಳಿಯಾದ ಶೈಲಿಯಲ್ಲಿ ಮನಮುಟ್ಟುವ ಭಾಷೆಯಲ್ಲಿ ಬರೆಯಲಾಗಿದೆ. ಹೇಳಬೇಕಾದ ಯಾವುದನ್ನೂ ಬಿಟ್ಟಿಲ್ಲ. ಮಧು ಸದೃಶ್ಯವಾದ ಶ್ರೀರಾಮ ಕಥಾನಕಕ್ಕೆ ಎಲ್ಲೂ ಭಾರವಾಗದ ಭಾಷೆಯೂ ಸೇರಿ ಇಡೀ ಕೃತಿ ಹತ್ತಾರು ಸಲ ಓದುವಂತೆ ಓದುಗರನ್ನು ಪ್ರೇರಿಸುತ್ತದೆ. ಇಂಥ ಸ್ತುತ್ಯ ಕಾರ್ಯಕ್ಕಾಗಿ ಶ್ರೀರಾಮಕಥಾ ಪ್ರೇಮಿಗಳು ಶ್ರೀ ಬಿಳಿಗಿರಿವಾಸನ್ ಅವರನ್ನು ವಂದಿಸುತ್ತಾರೆ, ಅಭಿನಂದಿಸುತ್ತಾರೆ. ರಾಮಾಯಣದ ಕಥೆಯನ್ನು ಸಂಗ್ರಹವಾಗಿ ನಿರೂಪಿಸುವ ಕಾರ್ಯದಲ್ಲಿ ಕಾಣುವ ಕುಶಲತೆ, ಅಚ್ಚುಕಟ್ಟುತನ ಮನಸೆಳೆಯುತ್ತದೆ.

ಅಸಮಾನ ಪ್ರತಿಭಾವಂತನೆನಿಸಿದ್ದು, ತುಂಬ ಚಿಕ್ಕ ವಯಸ್ಸಿನಲ್ಲೇ ದೇವರಿಗೆ ಬೇಕಾಗಿ ಹರಿಪಾದ ಸೇರಿದ ಆರ್. ವಿನಯ್ ಅವರ ಸಂಸ್ಮರಣೆ ಈ ಪುಸ್ತಕದ ಮೂಲಕ ತುಂಬ ಅರ್ಥಪೂರ್ಣವಾಗಿ ನಡೆದಿದೆ. ವಿನಯ್ ಫೌಂಡೇಶನ್ (ರಿ) ಸಂಸ್ಥೆಯವರ ಈ ಸ್ಮರಣಾರ್ಹ ಕಾರ್ಯ ಮೆಚ್ಚಲರ್ಹವಾದದ್ದು, ಅಭಿನಂದನಯೋಗ್ಯವೂ ಆಗಿದೆ. ■

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧ ವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ.

**ಡಾ|| ಪಿ. ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ